ISSN 2320 - 9941

ಸಾಹಿತ್ಯ-ಸಂಸ್ಕೃತಿ ಮಾಸಿಕ

# ಪ್ರತಿಸ್ಪಂದ



ಬೆಲೆ : 10 ರೂ

## ಕೊಡು - ಕೊಳ್ಳುವಿಕೆಗಳ ಸಂಕರ ...

ಸಂಪುಟ : 1 ಸಂಚಿಕೆ : 9 ಸೆಪ್ಟೆಂಬರ್ 2013



* ಮಾಗಿಯ ಕಥೆಯಲ್ಲಿ ಮಾಗಿದ ಮನಸ್ಸು: ಷೇಕ್ಸಪಿಯರ್ ನ **Winter's Tale**



* ಮೀಡಿಯ-ಕೆಲವು ಟಿಪ್ಪಣಿಗಳು

*Rhyme On!*

* ಪ್ರಾಸ






* ಸ್ಪಿನೋಝಾ ಮತ್ತವನ ರ್‍ಯಾಡಿಕಲ್ ಕೃತಿ ಎತಿಕ್ಸ್

# ಪ್ರತಿಸ್ಪಂದ

ಸೆಪ್ಟಂಬರ್ 2013
ಸಂಪುಟ : 1 ಸಂಚಿಕೆ : 9



ಸಂಪಾದಕರು:
ಕೆ.ಆರ್. ಬಸವರಾಜು
ತೋಟದ ಮನೆ ನಂ: 107 (25)
ಕಂಚಾಘಟ್ಟ ಹೊಸ ಬಡಾವಣೆ
ತಿಪಟೂರು – 572201
ಮೊ : 9481492481, 9945521522
ಇ–ಮೇಲ್ : prathispandha@gmail.com

ಮುದ್ರಕರು:
ಟಿ.ಡಿ.ರಾಮು
ನಿಟ್ಟೂರು,
ಮೊ : 9880951125



ಚಂದಾ ವಿವರ:

| | |
|---|---|
| ಬಿಡಿ ಪ್ರತಿ | 10 ರೂ |
| ವಾರ್ಷಿಕ ಚಂದಾ | 120 ರೂ |
| ಸಂಸ್ಥೆಗಳಿಗೆ | 150 ರೂ |

ಚಂದಾ ಹಣವನ್ನು ಸಂಪಾದಕರ ವಿಳಾಸಕ್ಕೆ ನಗದು, ಎಂ.ಓ., ಅಥವಾ ಡಿ.ಡಿ. ಮೂಲಕ ಕಳುಹಿಸಬಹುದು.
ಚಂದಾಹಣವನ್ನು ಕಳುಹಿಸುವವರು ತಮ್ಮ ಅಂಚೆ ವಿಳಾಸವನ್ನು ಸ್ಫುಟವಾಗಿ ಬರೆಯಿರಿ.


## ಒಳಪುಟಗಳಲ್ಲಿ





# ನಿಮ್ಮೊಂದಿಗೆ ....

*"Speak, for your lips are free*
*Speak, for your tongue is still yours*
*Your supple body is still yours*
*Speak, for your life is still yours"*

**Fiaz Ahmad Fiaz.**

ಸ್ವತಂತ್ರ ಜನರನ್ನು 'ಪ್ರಜೆ'ಗಳನ್ನಾಗಿಸುವ, ರೂಪಾಂತರಗೊಳಿಸುವ ಪ್ರಕ್ರಿಯೆಗೆ ಒಡ್ಡಿ ಕೊಳ್ಳಲು ತೆರಬೇಕಾದ ಬೆಲೆ ಬಲು ದುಬಾರಿಯಾದದ್ದು. ನಾವು ಪ್ರಜೆಗಳಾಗಲು ಅಥವಾ ರಾಜ್ಯ ವ್ಯವಸ್ಥೆಯ ಭಾಗವಾಗಿರುವುದಕ್ಕೆ ಏನನ್ನೆಲ್ಲಾ ಕಳೆದುಕೊಂಡಿದ್ದೇವೆಂದು ಬೆಚ್ಚಿ ಬೀಳುವಂತೆ ಎಚ್ಚರಿಸುವುದು ಜೇಮ್ಸ್ ಸಿ ಸ್ಕಾಟ್ ಅವರ ಅರಾಜಕ ಕೃತಿಯೆಂದೇ ಹೆಸರು ಮಾಡಿರುವ 'The Art of Not Being Governed'. ಜನರನ್ನು ಕಂದಾಯದ ಪರಿಧಿಗೆ ತರುವುದು ರಾಜ್ಯ ವ್ಯವಸ್ಥೆಯ ಕ್ರಮ. ಇದನ್ನು ಸಾಂಸ್ಕೃತಿಕ ಪರಿಭಾಷೆಯಲ್ಲಿ ಅಭಿವೃದ್ಧಿ, ಆರ್ಥಿಕ ಪ್ರಗತಿ, ಸಾಮಾಜಿಕ/ರಾಷ್ಟ್ರೀಯ ಐಕ್ಯತೆ, ತಿಳುವಳಿಕೆ ಎಂದೆಲ್ಲಾ ತಿಳಿಯಲಾಗುತ್ತದೆ. ಆದರೆ ರಾಜ್ಯ ವ್ಯವಸ್ಥೆಗೆ ನಿಜವಾಗಿಯೂ ಬೇಕಾಗಿರುವುದು ಜನರ ಆರ್ಥಿಕ ಚಟುವಟಿಕೆಗಳು, ತೆರಿಗೆಯ ಪರಿಧಿಗೆ ಅವರು ಒಳಪಡುವುದು ಮತ್ತು ತನ್ನ ಆಜ್ಞೆಗೆ ಒಳಪಡದ ಪ್ರಜೆಯ ನಿರ್ಧರಿತ ಆಸ್ತಿಯನ್ನು ಮಟ್ಟುಗೋಲು ಹಾಕಿಕೊಳ್ಳಬಲ್ಲ ಅಧಿಕಾರ. ನಾವು ಇವತ್ತು ಅಳವಡಿಸಿಕೊಂಡಿರುವ ಏಕಪ್ರಕಾರ ಬೆಳೆ, ಪ್ಲ್ಯಾಂಟೇಶನ್ ಮಾದರಿ ವ್ಯವಸಾಯ ಪದ್ಧತಿ ಎಲ್ಲವೂ ಸ್ವತಂತ್ರ ಜನರನ್ನು 'ರಾಜ್ಯ' ದ ವ್ಯಾಪ್ತಿಗೆ ಅಳವಡಿಸುವ ಹುನ್ನಾರಗಳೇ.

ಇಂದು ರಾಜ್ಯ ವ್ಯವಸ್ಥೆಯನ್ನು ಪೋಷಿಸುತ್ತಿರುವವರೂ ಸಹ ಒಂದು ಕಾಲದಲ್ಲಿ ಯಾರ ಆಳ್ವಿಕೆಗೂ ಒಳಪಡದ ಸ್ವತಂತ್ರ ಜನರಾಗಿದ್ದರು. ಪರಿಧಿಯಲ್ಲಿದ್ದ ಈ ಜನ ವೈವಿಧ್ಯಮಯವಾಗಿ, ಹೆಜ್ಜೆ-ಹೆಜ್ಜೆಗೂ ಎದುರಿಸಬೇಕಾಗಿದ್ದ ಅವಶ್ಯಕತೆಗಳನ್ನು ನಿಭಾಯಿಸಲು, ಹದವರಿಯದ ಭೋಗೊಳವನ್ನು ಒಗ್ಗಿಸಿಕೊಳ್ಳಲು, ಹೆಚ್ಚು-ಹೆಚ್ಚು ಸೃಜನಶೀಲರಾಗಿ ಇರಲೇಬೇಕಾದ ಅನಿವಾರ್ಯವಿತ್ತು. ಆದರೆ ಇವತ್ತು ಕಾಡು ನಾಶ, ಬೃಹತ್ ಅಣೆಕಟ್ಟು ಯೋಜನೆಗಳ ಹೆಸರಲ್ಲಿ ನಮ್ಮ ಭೌಗೋಳಿಕ ನಕ್ಷೆಯನ್ನೇ ಬದಲಾಯಿಸುತ್ತಿರುವ ಕಾರ್ಪೋರೇಟ್ ಜಗತ್ತು ಹಾಗೂ ರಾಜ್ಯ ವ್ಯವಸ್ಥೆ ಸಾಂಸ್ಕೃತಿಕ ಆಯಾಮವನ್ನು ಹೇಗೆ ಪೋಷಿಸಲು ಸಾಧ್ಯ? ದೂರವನ್ನು ನಾಶ ಮಾಡುವ ಎಲ್ಲಾ ತಾಂತ್ರಿಕತೆಗಳು ಉದಾಹರಣೆಗೆ, ಎಲ್ಲಾ ಹವಾಮಾನಕ್ಕೂ ಒಗ್ಗುವ ರಸ್ತೆಗಳು, ಸೇತುವೆಗಳು, ರೈಲ್ವೆ, ವಿಮಾನ, ಆಧುನಿಕ ಅಸ್ತ್ರ-ಶಸ್ತ್ರಗಳು, ದೂರವಾಣಿ, ಅಂತರ್ಜಾಲ ಹಾಗು ಎಲ್ಲಾ ತೆರಹದ Global Positioning System ಗಳನ್ನು ಜೇಮ್ಸ್ ಸ್ಕಾಟ್ ಜನರ ಸ್ವತಂತ್ರ ಹರಣ ಮಾಡುವ ವ್ಯವಸ್ಥೆಗಳೆಂದು ಜರಿಯುತ್ತಾನೆ.

ಇಷ್ಟೆಲ್ಲದರ ಜೊತೆಗೆ ರಾಜ್ಯ ವ್ಯವಸ್ಥೆಗೆ ಸಾಂಸ್ಕೃತಿಕ ನೀತಿಯೊಂದು ಕೂಡ ಇದೆ. ಎಲ್ಲಾ ತರಹದ ಮಾತೃ ಭಾಷೆಗಳ ಮೇಲೆ ನಿಯಂತ್ರಣ, ಅಲ್ಪಸಂಖ್ಯಾತರ ಭಾಷೆಗಳ ಮೇಲೆ ಒತ್ತಡ, ದೇಸೀ ತಳಿ, ದೇಸೀ ತಂತ್ರಜ್ಞಾನ, ದೇಸಿ ಹವ್ಯಾಸ, ಮನರಂಜನೆ, ಕತೆ ಹಾಡುಗಳು, ಬದುಕಿನ ಪದ್ಧತಿ, ಬೇಟೆಯಾಡುವ, ಅರಣ್ಯ ಕಾಯುವ, ಸ್ವಧರ್ಮವನ್ನು ಅನುಸರಿಸುವ, ಇಂತಹ ಎಲ್ಲಾ ಪರಿಧಿಯಲ್ಲಿರುವುದನ್ನು ತನ್ನ ಆಳ್ವಿಕೆಯ ವ್ಯಾಪ್ತಿಗೆ ಬಲವಂತವಾಗಿ ಒಗ್ಗಿಸಿಕೊಳ್ಳುವ ರಾಜ್ಯದ ಪ್ರಯತ್ನಗಳಿಗೆ (Internal colonization) ನಾವು ಸಹಜವಾಗಿ, ವಿರೋಧವಿಲ್ಲದೆ ಒಪ್ಪಿಸಿಕೊಳ್ಳುತ್ತಿರುವುದು ದುರಂತ. ಈ ದುರಂತವನ್ನು ತಡೆಯಲು ಎಂತಹ ಸಾಂಸ್ಕೃತಿಕ ನಿಲುವುಗಳು ಅನಿವಾರ್ಯ? ಯಾವ ಸಾಂಸ್ಕೃತಿಕ ನಡೆ, ಯಾವ ರೀತಿ, ಯಾವ ವಿಧ ನಮ್ಮ ಸೃಜನಶೀಲತೆಯನ್ನು ಕಾರ್ಯಶೀಲವಾಗಿಸಬಹುದು? ಬದುಕುವ/ಬದುಕಲು ಬಿಡುವ ಎಚ್ಚರ ಮಾತ್ರವೇ ನಮ್ಮನ್ನು ಸಾಂಸ್ಕೃತಿಕವಾಗಿ ಸೃಜನಶೀಲರನ್ನಾಗಿಸಬಹುದಲ್ಲವೇ? ಉತ್ತರಗಳಿಗಾಗಿ ಹುಡುಕಾಟ ನಡೆದಿದೆ.

ವಂದನೆಗಳು

**ನವರಾತ್ರಿ ಹಬ್ಬದ ಶುಭಾಶಯಗಳು**

– ಸಂಪಾದಕ

| ಪರಿಚಯ | 'ಪಿಯರಿ ಬೂರ್ಡ್ಯೂ'ಯು'(Pierre Bourdieu) ಅವರ "ಸಂಸ್ಕೃತಿ ವಿಶ್ಲೇಷಣೆ" |
| --- | --- |

("ಸಂಸ್ಕೃತಿ ಅಧ್ಯಯನದಲ್ಲಿ 'ಸಂಸ್ಕೃತಿ'ಯ ಮರುಚಿಂತನೆ": ಪೂರ್ವದ ಓದು - ಪ್ರಸ್ತುತದ ಅರ್ಥೈಸಿಕೊಳ್ಳುವಿಕೆ - ಭವಿಷ್ಯದ ಚಿಂತನೆ ಮಾಲಿಕೆಯ ನಾಲ್ಕನೆಯ ಭಾಗ)

ಸಂಸ್ಕೃತಿಯನ್ನು ವಿಭಿನ್ನ ನೆಲೆಗಳಲ್ಲಿ, ವಿಭಿನ್ನ ದೃಷ್ಟಿಕೋನಗಳಲ್ಲಿ ಅರ್ಥೈಸುವ ಪ್ರಯತ್ನಗಳು ಹಿಂದಿನಿಂದಲೂ ನಡೆಯುತ್ತಲೇ ಬಂದಿವೆ. ಸಂಸ್ಕೃತಿಯನ್ನು ನೈತಿಕ, ಧಾರ್ಮಿಕ, ಜ್ಞಾನಾತ್ಮಕ ನೆಲೆಗಳಲ್ಲಿ ವ್ಯಾಖ್ಯಾನಿಸುವ



ಆರ್ನಾಲ್ಡಿಯನ್ ಮತ್ತು ಲೀವಿಸಿಸ್ಟ್ ಪಂಥೀಯರು ಒಂದೆಡೆಯಾದರೆ, ಸಂಸ್ಕೃತಿ ಕೇವಲ ಕನಸು ಮತ್ತು ಅಂತಹ ಅಮೂರ್ತ ಚಿತ್ರಣಗಳು ಮಾತ್ರ ಎಂದು ಅರ್ಥೈಸಿದ ಮಾರ್ಕ್ಸಿಸ್ಟ್ ಚಿಂತಕರು ಇನ್ನೊಂದೆಡೆ; ಜನಸಾಮಾನ್ಯರ ದೃಷ್ಟಿಕೋನದಲ್ಲಿ, ಅವರ ದಿನನಿತ್ಯದ ವರ್ತನೆ-ಚಟುವಟಿಕೆಗಳಲ್ಲಿ ಸಂಸ್ಕೃತಿಯನ್ನು ಕಂಡ ರೇಮಂಡ್ ವಿಲಿಯಮ್ಸ್ ಮತ್ತೊಂದು ಕಡೆ. ಹೀಗೆಯೇ ಸಾಗಿ ಬಂದ ಸಂಸ್ಕೃತಿ ವಿಶ್ಲೇಷಣೆಗೆ ರಾಜಕೀಯ, ಆರ್ಥಿಕ, ಶೈಕ್ಷಣಿಕ ಮತ್ತು ಅಂತಹ ಇತರೆ ನೆಲೆಗಳ ವ್ಯಾಖ್ಯಾನ ಒದಗಿಸಿದ ಒದಗಿಸಿದ ಇತ್ತೀಚಿನ ಚಿಂತಕರ ವಿಶ್ಲೇಷಣೆ ಇನ್ನೂ ಒಂದು ಕಡೆ. ಈ ಲೇಖನ ಸರಣಿಯ ಪ್ರಸ್ತುತ ಭಾಗದಲ್ಲಿ ಈ ಬಗ್ಗೆ ವಿಶ್ಲೇಷಿಸಲಾಗಿದೆ.

ಪಿಯರಿ ಬೂರ್ಡ್ಯೂ ಸಂಸ್ಕೃತಿ ಅಧ್ಯಯನದಲ್ಲಿ ಬಂದ ಅಗ್ರಗಣ್ಯ ಚಿಂತಕರಲ್ಲಿ ಒಬ್ಬ. ಫ್ರೆಂಚ್ ಸಮಾಜಶಾಸ್ತ್ರಜ್ಞ, ಮಾನವ ಶಾಸ್ತ್ರಜ್ಞ ಮತ್ತು ತತ್ವಶಾಸ್ತ್ರಜ್ಞನಾಗಿ ಫ್ರೆಂಚ್ ಸಂಸ್ಕೃತಿ ಮೇಲೆ ಅನೇಕ ಪ್ರಾಯೋಗಿಕ ಸಂಶೋಧನೆಗಳನ್ನು ನಡೆಸಿದ ಬೂರ್ಡ್ಯೂ ಸಂಸ್ಕೃತಿ ರೂಪುಗೊಳ್ಳುವಿಕೆಯ ಬಗ್ಗೆ ಆಳವಾದ ಅಧ್ಯಯನ ನಡೆಸಿದ. ಸಂಸ್ಕೃತಿ ರೂಪುಗೊಳ್ಳುವಿಕೆಯಲ್ಲಿ ವರ್ಗದ (ಸಾಮಾಜಿಕ-ಆರ್ಥಿಕ) ಅಸ್ಮಿತೆಯನ್ನು ಪ್ರಬಲವಾಗಿ ಪ್ರತಿಪಾದಿಸಿದ. ಅವನ ಪ್ರಕಾರ ಒಂದು ನಿರ್ದಿಷ್ಟವಾದ ವರ್ಗ / ಜನ ಸಮೂಹವು ಒಂದು ಸಂಸ್ಕೃತಿಯ ರೂಪುಗೊಳ್ಳುವಿಕೆಯೊಂದಿಗೆ ರೂಪುಗೊಳ್ಳುತ್ತದೆಯೇ ಹೊರತು ಯಾವುದೇ ಆರ್ಥಿಕ/ರಾಜಕೀಯ ಅಥವಾ ಇತರ ಅಂಶಗಳೊಂದಿಗಲ್ಲ. ಆದರೆ ಸಂಸ್ಕೃತಿ ಮತ್ತು ವರ್ಗ ರೂಪುಗೊಂಡ ನಂತರ ತಾನೇ ತಾನಾಗಿ ಅದರ ಸಮಾಜವೂ, ಆರ್ಥಿಕತೆಯೂ, ರಾಜಕೀಯ ವ್ಯವಸ್ಥೆಯೂ ರೂಪುಗೊಳ್ಳುತ್ತದೆ.

ರೊಮ್ಯಾಂಟಿಕ್ ಸಿದ್ಧಾಂತಿಗಳು ನಂಬಿದ್ದ ಸಂಸ್ಕೃತಿ ರೂಪುಗೊಳ್ಳುವಿಕೆಯ ಈ ಪ್ರಕ್ರಿಯೆಯನ್ನು ಪಿಯರಿಬೂರ್ಡ್ಯೂ ತನ್ನ ಸಂಸ್ಕೃತಿ ವಿಶ್ಲೇಷಣೆಯಲ್ಲಿ ಒಪ್ಪಿಕೊಳ್ಳುತ್ತಾನೆ ಅವನ ಪ್ರಕಾರ, ಒಂದು ಕ್ಷೇತ್ರದಲ್ಲಿ ಏನು ಸಂಭವಿಸುತ್ತದೋ ಅದರ ಪರಿಣಾಮ ಅದಕ್ಕೆ ಸಂಬಂಧಿಸಿದ ಇತರೆ ಕ್ಷೇತ್ರಗಳ ಮೇಲೂ (ಒಂದು ಕ್ಷೇತ್ರ ಮತ್ತೊಂದಕ್ಕಿಂತ ಭಿನ್ನವಾಗಿದ್ದರೂ, ಸ್ವತಂತ್ರ ಅಸ್ತಿತ್ವ ಹೊಂದಿದ್ದರೂ) ಆಗುತ್ತದೆ. ಏಕೆಂದರೆ, ಸಂಸ್ಕೃತಿಯು ಯಾವಾಗಲೂ ಅದರ ವರ್ಗ ಅಥವಾ ಜನಸಮೂಹದೊಂದಿಗೆ ತನ್ನ ಅಸ್ಮಿತೆಯನ್ನು ಹಂಚಿಕೊಂಡಿರುತ್ತದೆ. ಜೊತೆಗೆ, ಈ ವರ್ಗವು ಅದರೊಳಗೆಯೇ ಇರುವ ವಿವಿಧ ಪದರಗಳ ಆಧಾರದ ಮೇಲೆ ಅಸ್ತಿತ್ವದಲ್ಲಿರುತ್ತದೆ. ಮತ್ತು ಈ ಪದರಗಳ ನಡುವೆ ಯಾವಾಗಲೂ ಒಂದು ತರಹದ ಸ್ಪರ್ಧೆ ನಡೆಯುತ್ತಿರುತ್ತದೆ. ಇವುಗಳ ನಡುವಿನ ಈ ಸಂಬಂಧವನ್ನು ಬೂರ್ಡ್ಯೂ "ಹೊಮಾಲಜಿ" (homology) ಎಂದು ಕರೆದ.

ಬೂರ್ಡ್ಯೂ ಪ್ರಕಾರ, ಸಂಸ್ಕೃತಿಯು ಆದರ್ಶಗಳ(ideology) ಒಂದು ಸಮೂಹ. ಅಂದರೆ ಎಲ್ಲಾ ಸಂಸ್ಕೃತಿಗಳಲ್ಲೂ ಪ್ರತಿಯೊಂದು ಸಂಸ್ಕೃತಿಗೆ ತನ್ನದೇ ಆದ ಆದರ್ಶಗಳಿರುತ್ತವೆ ಮತ್ತು ಆ ಸಂಸ್ಕೃತಿಯನ್ನು ಅನುಸರಿಸುವ ವರ್ಗದ ಬಹುಮತದ (plurality of ideology) ಪ್ರೋತ್ಸಾಹ ಇರುತ್ತದೆ. ಆದರೆ ಇಲ್ಲಿ ಪ್ರಬಲ ವರ್ಗದ ಆದರ್ಶ ಇತರೆ ವರ್ಗಗಳ ನಡುವೆ ಮೇಲುಗೈ ಸಾಧಿಸುತ್ತದೆ.

ಬೂರ್ಡ್ಯೂಯು ಹೇಳುವಂತೆ ಪ್ರತಿಯೊಬ್ಬ ವೈಯಕ್ತಿಕ ಮಾನವ ಜೀವಿಯೂ ತನ್ನ ವರ್ಗದ ಸಂಸ್ಕೃತಿಯ "ನಿಯೋಗಿ"ಯಂತೆ (agent) ವರ್ತಿಸುತ್ತಿರುತ್ತಾನೆ. ಇದೊಂದು ಸಮಸ್ಯಾತ್ಮಕ ಹೇಳಿಕೆಯೆಂದು ವಿಮರ್ಶಕರು ದೂಷಿಸಿದರೂ ಬೊರ್ಡೆಯು ಚಿಂತನೆ ಸರಿಯೆಂದು ಇತರರು ಹೊಗಳಿದರು. ಅವನ ಪ್ರಕಾರ, ಈ ಪ್ರತಿಯೊಬ್ಬ ವ್ಯಕ್ತಿಯೂ ತನ್ನ ನಿರ್ದಿಷ್ಟ ನಿಯೋಗವನ್ನು ಹೊಂದಿರುವುದರಿಂದ ಸಂಸ್ಕೃತಿಯು ಅವನ/ಅವಳ ಮೂಲಕವೇ ಮಾತನಾಡುತ್ತಿರುತ್ತದೆ (ಅಸ್ತಿತ್ವದಲ್ಲಿರುತ್ತದೆ).

"ಸಂಸ್ಕೃತಿಯು ಒಂದು ರೀತಿಯಲ್ಲಿ ವ್ಯವಸ್ಥಿತವಾದ ಮತ್ತು ರಚನಾತ್ಮಕವಾದ ಅಸ್ತಿತ್ವವುಳ್ಳ ಅಂಶ. ಅದೊಂದು ಸಂಕೇತಗಳ ವ್ಯವಸ್ಥೆಯೂ ಹೌದು. ಈ ಸಾಂಕೇತಿಕ ವ್ಯವಸ್ಥೆಯು ಅದರದ್ದೇ ಆದ ಕೆಲವು ನಿರ್ದಿಷ್ಟ ನೀತಿ ನಿಯಮಗಳಿಂದ ನಿರ್ದೇಶಿತ ವಾಗಿರುತ್ತದೆ" ಎಂದು ಹೇಳುವ ಬೂರ್ಡ್ಯೂ ಅದಕ್ಕೆ ಕೊಡುವ ಉದಾಹರಣೆ – ಸಂಸ್ಕೃತಿಯಂತೆಯೇ ಸಾಂಕೇತಿಕವಾಗಿರುವ ಕಲೆ ಮತ್ತು ಸಾಹಿತ್ಯ. ಇಲ್ಲಿ ಕಲೆ, ಸಾಹಿತ್ಯ, ಧರ್ಮ, ಮಾಧ್ಯಮ, ರಾಜಕೀಯ ಮತ್ತು ಅಂತಹ ಎಲ್ಲಾ ಜ್ಞಾನಾತ್ಮಕ ಸಂಕೇತಗಳೊಂದಿಗೆ ಸಂಸ್ಕೃತಿ ಅಸ್ತಿತ್ವದಲ್ಲಿರುತ್ತದೆ.

ಸಾಂಕೇತಿಕ ವ್ಯವಸ್ಥೆಯಾಗಿ ಆದರ್ಶಗಳಿಂದ ನಿರ್ದೇಶಿತವಾಗಿರುವ ಸಂಸ್ಕೃತಿಯಲ್ಲಿ ಆ ಆದರ್ಶಗಳನ್ನು ರೂಪಿಸಲು ಪ್ರಜ್ಞೆ ಅಥವಾ ಬುದ್ಧಿಶಕ್ತಿ ಪ್ರಮುಖ ಪಾತ್ರ ವಹಿಸುತ್ತದೆ. ಇದನ್ನು ಬೂರ್ಡ್ಯೂ "ಇಂಟೆಲಿಜೆನ್ಸಿಯಾ" (intelligentsia) ಎಂದು ಕರೆಯುತ್ತಾನೆ.

ಮತ್ತೊಂದೆಡೆ, ಎಲ್ಲಾ ಅಂಶಗಳಲ್ಲೂ ಪ್ರಬಲವಾಗಿರುವ ವರ್ಗ ತನ್ನದೇ ಆದ ಮೌಲ್ಯ, ಪ್ರಮಾಣ, ಆದರ್ಶಗಳನ್ನು ರೂಪಿಸುವ ಮತ್ತು ಸಂಸ್ಕೃತಿಯ ನಿಯೋಗಿಗಳ ಮೇಲೆ ಅವುಗಳನ್ನು ಪಾಲಿಸುವ ಒತ್ತಡ ಹೇರುವ ಮೂಲಕ ಮೂಲಕ ಈ 'ಇಂಟೆಲಿಜೆನ್ಸಿಯಾ'ವನ್ನು ತನ್ನ ಹತೋಟಿ ಯಲ್ಲಿಟ್ಟುಕೊಳ್ಳಲು ಪ್ರಯತ್ನಿಸುತ್ತಿರುತ್ತದೆ. ಈ ಕಾರಣಕ್ಕಾಗಿಯೇ ಪ್ರಬಲವಲ್ಲದ ವರ್ಗಗಳು ಇದನ್ನು ಪ್ರಬಲ ವರ್ಗವೆಂದು ಒಪ್ಪಿಕೊಳ್ಳುವುದು.

ಸಾಂಸ್ಕೃತಿಕ ಅಭ್ಯಾಸಗಳು, ವರ್ತನೆಗಳು ಸಾಮಾನ್ಯವಾಗಿ ಅದನ್ನು ಅನುಸರಿಸುವ ಜನರಿಂದಲೇ ಉತ್ಪಾದನೆಯಾದರೂ ಅದರ ಹಿಂದೆ ಅಮೂರ್ತವಾದ ಈ 'ಇಂಟೆಲಿಜೆನ್ಸಿಯಾ'ದ ಪಾತ್ರವಿರುತ್ತದೆ. ಫರ್ಡಿನಾಂಡ್ ಡಿ ಸಸ್ಯೂರ್ ಪ್ರತಿಪಾದಿಸಿದ "ಭಾಷೆಯ ಯಾದೃಚ್ಛಿಕತೆ"ಯಂತೆಯೇ (arbitrariness of language) ಬೂರ್ಡ್ಯೂನ ಸಂಸ್ಕೃತಿ ಯಾದೃಚ್ಛಿಕವಾದುದು. ಇಲ್ಲಿ "ಸಾಂಸ್ಕೃತಿಕ ಅಂಶಗಳಿಗೂ ಅವುಗಳು ಪ್ರತಿನಿಧಿಸುವ ಸಾಂಸ್ಕೃತಿಕ ಅಭ್ಯಾಸಗಳಿಗೂ, ವರ್ತನೆಗಳಿಗೂ ಯಾವುದೇ ನೇರವಾದ ಮತ್ತು ತರ್ಕಬದ್ಧವಾದ ಸಂಬಂಧವಿಲ್ಲ. ಯಾಕೆಂದರೆ ಈ ಎಲ್ಲಾ ವರ್ತನೆಗಳನ್ನೂ, ಅಭ್ಯಾಸಗಳನ್ನೂ (discourses) ಅವುಗಳ ಮೂಲಕ ಅವುಗಳದ್ದೇ ಆದ ನಿದಿಷ್ಟ ಅರ್ಥಗಳನ್ನೂ (meanings) ವ್ಯಕ್ತಪಡಿಸುವುದು ಬೇರೆ ಯಾರೋ ಅಲ್ಲ ಮನುಷ್ಯ". ಇದು ಬೂರ್ಡ್ಯೂ ಹೇಳಿರುವ ನಾವು ದಿನನಿತ್ಯ ಕಾಣುವ ಸತ್ಯ.

### ಸಂಸ್ಕೃತಿಯಲ್ಲಿ "ಸಾಂಕೇತಿಕ ಅಧಿಕಾರ"ದ (Symbolic Power) ಪಾತ್ರ:

ಸಾಂಸ್ಕೃತಿಕವಾಗಿ ಈ ಪ್ರಾಬಲ್ಯ (dominance) ಅಧಿಕಾರದಿಂದ (power) ಸಾಧಿಸಲ್ಪಡುತ್ತದೆ. ಅಂದರೆ, ಯಾವುದೋ ಕಾರಣದಿಂದ – ಭೌತಿಕವಾದ ಇಲ್ಲವೇ ಬೌದ್ಧಿಕವಾದ ಶಕ್ತಿಯೊಂದಿಗೆ – ಪ್ರಬಲವಾಗುವ ಯಾವುದೋ ಒಂದು ವರ್ಗ ಆ ಶಕ್ತಿಗಳನ್ನು ಬಳಸದೆ, ತಾನು ಹತೋಟಿಗೆ ತೆಗೆದುಕೊಳ್ಳುವ 'ಇಂಟೆಲಿಜೆನ್ಸಿಯಾ'ವನ್ನು ಕಾನೂನುಬದ್ಧಗೊಳಿಸುವ (legitimize) ಮತ್ತು ಪ್ರಮಾಣಬದ್ಧಗೊಳಿಸುವ (standardize) ಮೂಲಕ ಪ್ರಾಬಲ್ಯವನ್ನು ಸಾಧಿಸುತ್ತದೆ. ಮತ್ತು ಹಾಗೆ ಸಾಧಿಸಿದ ಸಾಂಕೇತಿಕ (ಸಂಕೇತಗಳ ರೂಪದ) ಅಧಿಕಾರವನ್ನು (symbolic power) ಇತರರ ಮೇಲೆ ಹೇರುತ್ತದೆ.

ಅಂದರೆ ಇಲ್ಲಿ ಅದು ಭೌತಿಕವಾದ ಅಧಿಕಾರವನ್ನೋ ಅಥವಾ ರಾಜಕೀಯ ಅಧಿಕಾರವನ್ನೋ ಬಳಸುವುದಿಲ್ಲ. ಹಾಗಾಗಿಯೇ ಅದು ತನ್ನ 'ಇಂಟೆಲಿಜೆನ್ಸಿಯಾ'ದ ಮೂಲಕ ಸಾಧಿಸುವ ಈ ಅಧಿಕಾರಕ್ಕೆ ಬೂರ್ಡ್ಯೂ symbolic power ಎಂದು ಕರೆಯುತ್ತಾನೆ. ಇದು ಬಹು ದೀರ್ಘವಾದ ಪ್ರಕ್ರಿಯೆಯಾಗಿದ್ದು ಇದರಿಂದ ಆ ವರ್ಗಕ್ಕೆ ದೊರೆಯುವ ಅಧಿಕಾರವೂ ಅಷ್ಟೇ ದೀರ್ಘಕಾಲ ಉಳಿಯುತ್ತದೆ.

ಈ ವರ್ಗವು ತನ್ನ ಸಾಂಸ್ಕೃತಿಕ ಉತ್ಪನ್ನಗಳಿಗೆ ಮಾರುಕಟ್ಟೆಯಲ್ಲಿ "ಸತ್ಯವಲ್ಲದ ಸಾಂಘಿಕತೆ"ಯನ್ನು (false totality) ಸೃಷ್ಟಿಸುವ ಮೂಲಕ ತನ್ನ ಸಾಂಸ್ಕೃತಿಕ ಆದರ್ಶಗಳಿಗೆ ಕಾನೂನುಬದ್ಧ ಪ್ರಮಾಣಗಳನ್ನು ಒದಗಿಸಿಕೊಳ್ಳುತ್ತದೆ. ಅಂದರೆ ಈ ಸಾಂಸ್ಕೃತಿಕ ಉತ್ಪನ್ನಗಳು ನೈಜವಲ್ಲದಿದ್ದರೂ (ಕೆಲವೊಮ್ಮೆ ಶ್ರೇಷ್ಠವಲ್ಲದಿದ್ದರೂ), ಪ್ರಾಬಲ್ಯದ ಯಾವ ಲಕ್ಷಣಗಳನ್ನು ಹೊಂದಿಲ್ಲದಿದ್ದರೂ, ಈ ವರ್ಗ ತನ್ನ 'ಇಂಟೆಲಿಜೆನ್ಸಿಯಾ'ದ ಆದರ್ಶಗಳ ಮೂಲಕ ಅವುಗಳನ್ನು "ನೈಜ ಸಾಂಘಿಕತೆ"ಯ (real totality) ಉತ್ಪನ್ನಗಳೆಂಬಂತೆ ಬಿಂಬಿಸುತ್ತದೆ.

ಮಾರುಕಟ್ಟೆಯಲ್ಲಿ ಯಾವುದೇ ಸಾಂಸ್ಕೃತಿಕ ಉತ್ಪನ್ನಕ್ಕೆ ನೈಜ ಸಾಂಘಿಕತೆ ಗಳಿಸುವುದು ಅಸಾಧ್ಯವಾದುದಾದರೂ ಮಾರುಕಟ್ಟೆಯಲ್ಲಿ ಸಾಂಸ್ಕೃತಿಕ ಉತ್ಪನ್ನಗಳ ನಡುವೆ ಪೈಪೋಟಿ ಇರುವುದರಿಂದ ಮತ್ತು ಪ್ರಬಲ ವರ್ಗ ತನ್ನ ಆದರ್ಶಗಳಿಗೆ "ನೈಜ (ವಲ್ಲದ) ಸಾಂಘಿಕತೆ"ಯನ್ನು ಒದಗಿಸುವುದರಿಂದ ಇತರೆ ವರ್ಗಗಳು ಅವುಗಳನ್ನು ಒಪ್ಪುವಂತೆ ಮಾಡುತ್ತದೆ. ಕೆಲವರು (power politics) ಎಂದೂ, ಮತ್ತೆ ಕೆಲವರು (cultural politics) ಎಂದೂ ವಿಶ್ಲೇಷಿಸಿದ ಬೂರ್ಡ್ಯೂನ ಈ ವಿವರಣೆಯೂ ಇಂದು ಅತ್ಯಂತ ಪ್ರಸ್ತುತವೆಂಬುದು ಒಪ್ಪಲೇಬೇಕಾದ ಸಂಗತಿ.

ಬೂರ್ಡ್ಯೂ ಹೇಳುವ ಈ ಅಧಿಕಾರ ಭೌತಿಕ ಅಥವಾ ರಾಜಕೀಯ ಅಧಿಕಾರವಲ್ಲದಿದ್ದರೂ ಅವೆರಡಕ್ಕೂ ಇರುವ ಶಕ್ತಿ ಈ ಸಾಂಕೇತಿಕ ಅಧಿಕಾರಕ್ಕಿರುತ್ತದೆ. ಹೀಗಾಗಿಯೇ ಈ ಅಧಿಕಾರವನ್ನು ಸಾಧಿಸುವ ವರ್ಗ ಸಾಂಸ್ಕೃತಿಕವಾಗಿ ಮತ್ತು ಇತರೆ ಎಲ್ಲ ಅಂಶಗಳಲ್ಲಿ ಪ್ರಾಬಲ್ಯ ಸಾಧಿಸುತ್ತದೆ.

**ಸಾಂಸ್ಕೃತಿಕ ಬಂಡವಾಳ ಮತ್ತು ಸಾಂಕೇತಿಕ ಅಧಿಕಾರ:**

ಪಿಯರಿ ಬೂರ್ಡ್ಯೂ ಹೇಳುವಂತೆ ಮಾರುಕಟ್ಟೆಯಲ್ಲಿ ಆರ್ಥಿಕ ಬಂಡವಾಳ ಹೇಗೆ ಹೂಡಿಕೆಯಾಗುತ್ತದೆಯೋ, ಹಾಗೆಯೇ ಸಾಂಸ್ಕೃತಿಕ ಪ್ರಾಬಲ್ಯ ಮತ್ತು ಸಾಂಕೇತಿಕ ಅಧಿಕಾರಗಳನ್ನು ಸಾಧಿಸಲು ಪ್ರಬಲ ವರ್ಗ ತನ್ನ 'ಇಂಟೆಲಿಜೆನ್ಸಿಯಾ'ದ ಮೂಲಕ ಸಾಂಸ್ಕೃತಿಕ ಬಂಡವಾಳವನ್ನು ತೊಡಗಿಸುತ್ತದೆ. ಇಲ್ಲಿ ಆರ್ಥಿಕ ಬಂಡವಾಳ ಹೇಗೆ ಹಣದ ಮೇಲೆ ಕೇಂದ್ರೀಕೃತವಾಗಿರುತ್ತದೋ, ಹಾಗೆಯೇ ಸಾಂಸ್ಕೃತಿಕ ಬಂಡವಾಳವೂ ತನ್ನ ಆದರ್ಶಗಳ, ತಾನೇ ಸೃಷ್ಟಿಸಿದ false totality ಗಳ ಮೇಲೆ ಕೇಂದ್ರೀಕೃತವಾಗಿರುತ್ತದೆ.

ಬೂರ್ಡ್ಯೂ ಕೂಡ ಆರ್ಥಿಕ ವರ್ಗ ಮತ್ತು ಬೌದ್ಧಿಕ ವರ್ಗಗಳ ನಡುವೆ ವ್ಯತ್ಯಾಸ ಗುರ್ತಿಸುತ್ತಾನೆ. ಅಂದರೆ ಆರ್ಥಿಕ ವರ್ಗ ಹಣದ ಬಂಡವಾಳವನ್ನು ತೊಡಗಿಸಿದರೆ, ಬೌದ್ಧಿಕ ವರ್ಗ ಆದರ್ಶಗಳ (ಇಂಟೆಲಿಜೆನ್ಸಿಯಾ) ಬಂಡವಾಳವನ್ನು ತೊಡಗಿಸುತ್ತದೆ. ಯಾವಾಗ ಆ ಬೌದ್ಧಿಕ ವರ್ಗ ತನ್ನ ಆದರ್ಶಗಳ ಸಾಂಸ್ಕೃತಿಕ ಬಂಡವಾಳವನ್ನು ತೊಡಗಿಸುತ್ತದೋ ಮತ್ತು ಆ ಮೂಲಕ ಸಾಂಕೇತಿಕ ಅಧಿಕಾರವನ್ನು ಪಡೆಯುತ್ತದೋ ಆ ಸಂಸ್ಕೃತಿ ಮತ್ತು ವರ್ಗ ಪ್ರಾಬಲ್ಯವನ್ನು ಗಳಿಸುತ್ತದೆ. ಮುಂದೆ ಅದೇ ಸಂಸ್ಕೃತಿ ಮತ್ತು ವರ್ಗ ಭೌತಿಕವಾದ, ರಾಜಕೀಯವಾದ, ಆರ್ಥಿಕವಾದ ಅಧಿಕಾರವನ್ನೂ ಪಡೆಯುತ್ತದೆ. ಹೀಗೆ ಪಡೆದ ಅಧಿಕಾರಗಳು ಪ್ರಬಲವಲ್ಲದ ವರ್ಗಗಳ ಮೇಲೆ ನಿರಂತರವಾಗಿ ಕೆಲಸ ಮಾಡುತ್ತಿರುತ್ತವೆ. ಹೀಗಾಗಿ ಬೂರ್ಡ್ಯೂ ಕೂಡ ಅಡೋರ್ನೊ ಮತ್ತು ಹಾರ್ಕ್‌ಹೈಮರ್ ಅವರ "ಸಂಸ್ಕೃತಿ ಕೈಗಾರಿಕೆ"ಯ ಅಸ್ತಿತ್ವವನ್ನು ಪ್ರತಿಪಾದಿಸುತ್ತಾನೆ.

ಪ್ರಬಲ ಸಂಸ್ಕೃತಿ ಮತ್ತು ವರ್ಗದ ಸಾಂಕೇತಿಕ ಅಧಿಕಾರ ತನ್ನಷ್ಟಕ್ಕೆ ತಾನೇ ಅಸ್ತಿತ್ವದಲ್ಲಿರುವುದಿಲ್ಲ. ಬದಲಿಗೆ ಅದು ಸೃಷ್ಟಿಸುವ ಅಸಮಾನ ಸಾಮಾಜಿಕ ಶ್ರೇಣಿ ವ್ಯವಸ್ಥೆಯಿಂದ ಆ ಶ್ರೇಣಿ ವ್ಯವಸ್ಥೆಯಲ್ಲಿರುವ ಪ್ರಾಬಲ್ಯವುಳ್ಳ ಸಂಸ್ಕೃತಿ ಮತ್ತು ವರ್ಗಕ್ಕೆ ಸಾಂಕೇತಿಕ ಅಧಿಕಾರ ದೊರೆಯುತ್ತದೆ. ಹೀಗಾಗಿಯೇ ಇತರೆ ಸಂಸ್ಕೃತಿ ಮತ್ತು ವರ್ಗಗಳು ಈ ಪ್ರಬಲ ಸಂಸ್ಕೃತಿ ಮತ್ತು ವರ್ಗದ ಸಾಂಕೇತಿಕ ಅಧಿಕಾರದಲ್ಲಿ ನಂಬಿಕೆ ಇಟ್ಟುಕೊಂಡಿರುತ್ತಾರೆ. ಆದರೆ, ಸಾಂಸ್ಕೃತಿಕ ಉತ್ಪನ್ನಗಳ ಉತ್ಪಾದನೆಯಲ್ಲಿ ವಿವಿಧ ಸಂಸ್ಕೃತಿಗಳ ಆದರ್ಶಗಳ ನಡುವಿನ ಪೈಪೋಟಿಯಲ್ಲಿ ಸಾಮಾಜಿಕ, ಆರ್ಥಿಕ, ರಾಜಕೀಯ... ಇತ್ಯಾದಿ ಕ್ಷೇತ್ರಗಳ ನಡುವೆಯೂ ಪೈಪೋಟಿ ಇರುತ್ತದೆಂಬುದನ್ನು ಹಾಗೂ ಈ ಪೈಪೋಟಿಯೇ ಮುಂದೆ ಆದರ್ಶಗಳ ನಡುವಿನ ಪೈಪೋಟಿಯಾಗಿ ಬದಲಾಗುತ್ತದೆಂಬುದನ್ನು ಬಹುತೇಕ ಸಂಸ್ಕೃತಿ-ವರ್ಗಗಳು ಗುರ್ತಿಸುವುದಿಲ್ಲ. ಹೀಗಾಗಿ ಇವುಗಳನ್ನು ಗುರ್ತಿಸುವ (ಬೌದ್ಧಿಕವಾಗಿ ಪ್ರಬಲವಾಗಿರುವ) ಸಂಸ್ಕೃತಿ-ವರ್ಗವು ಸಾಂಕೇತಿಕ ಅಧಿಕಾರವನ್ನು ತನ್ನದಾಗಿಸಿಕೊಳ್ಳುತ್ತದೆ.

## ವರ್ಗ ಮತ್ತು ಸಾಂಸ್ಕೃತಿಕ ಅಭಿರುಚಿ:

ಈ ಬದಲಾವಣೆಯನ್ನು ಗುರುತಿಸಲಾಗದಿರುವಿಕೆಯು ಹೇಗೆ ಸಾಂಸ್ಕೃತಿಕ ಅಭಿರುಚಿಯ ಮಟ್ಟವನ್ನು ನಿರ್ಧರಿಸುತ್ತದೆ ಎಂಬುದನ್ನು ಪಿಯರಿ ಬೂರ್ಡ್ಯೂ, ಸಂಸ್ಕೃತಿ ವಿಶ್ಲೇಷಣೆಯ ತನ್ನ ಮುಂದಿನ ಭಾಗದಲ್ಲಿ ಯಾವುದೇ ವ್ಯಕ್ತಿಯ ಸಾಂಸ್ಕೃತಿಕ ಅಭಿರುಚಿಯು ಹೇಗೆ ಅವನ ವರ್ಗದಿಂದ (ಸಾಮಾಜಿಕ, ಆರ್ಥಿಕ, ರಾಜಕೀಯ, ಮುಖ್ಯವಾಗಿ ಶೈಕ್ಷಣಿಕ.....) ನಿರ್ಧರಿಸಲ್ಪಡುತ್ತದೆ ಎಂಬುದರ ಮೂಲಕ ವಿವರಿಸುತ್ತಾನೆ. ಅವನ ಪ್ರಕಾರ ಎಲ್ಲ ಕ್ಷೇತ್ರಗಳಲ್ಲಿ ಉನ್ನತವಾದ ಮತ್ತು ಪ್ರಾಬಲ್ಯವಿರುವ ವರ್ಗದ ವ್ಯಕ್ತಿ ಸಾಂಸ್ಕೃತಿಕವಾಗಿ ಒಳ್ಳೆಯ ಅಭಿರುಚಿಯನ್ನು ಹೊಂದಿರುತ್ತಾನೆ ಮತ್ತು ಅದು ಇತರರಿಗಿಂತ ಉನ್ನತ (superior) ವಾಗಿರುತ್ತದೆ ಮತ್ತು ಅಂತಹವರನ್ನು ಸಮಾಜದಲ್ಲಿ ಗೌರವದಿಂದ ನೋಡಲಾಗುತ್ತದೆ. ಹಾಗೆಯೇ ಕೆಳ ಮತ್ತು ಪ್ರಾಬಲ್ಯವಿಲ್ಲದ ವರ್ಗದ ವ್ಯಕ್ತಿಯ ಅಭಿರುಚಿಗಳು ಸಾಂಸ್ಕೃತಿಕವಾಗಿ ಉನ್ನತವಾಗಿರುವುದಿಲ್ಲ (inferior) ಮತ್ತು ಅಂತಹವರು ಸಾಮಾಜಿಕವಾಗಿ ಕೀಳು ದೃಷ್ಟಿಯಲ್ಲಿರುತ್ತಾರೆ.

ಆದ್ದರಿಂದ, ಸಾಮಾನ್ಯವಾಗಿ ಮೇಲ್ವರ್ಗದಲ್ಲಿ ಹುಟ್ಟಿದವರಿಗೆ ಸ್ವಾಭಾವಿಕವಾಗಿಯೇ ಶ್ರೇಷ್ಠ ಅಭಿರುಚಿಗಳಿರುತ್ತವೆಂದೂ, ಕೆಳ ವರ್ಗದಲ್ಲಿ ಹುಟ್ಟಿದವರಿಗೆ ಉನ್ನತವಲ್ಲದ ಅಭಿರುಚಿಗಳಿರುತ್ತವೆಂದೂ ಎಲ್ಲರೂ ನಂಬುತ್ತಾರೆ. ಇದು ಅತ್ಯಂತ ಸ್ವಾಭಾವಿಕ ಎಂದು ಬಿಂಬಿಸಲಾಗಿರುತ್ತದೆ. ಉದಾಹರಣೆಗೆ, ಭಾರತದಲ್ಲಿ, ಉನ್ನತ ವರ್ಗದವರಿಗೆ ಶಾಸ್ತ್ರೀಯ ಸಂಗೀತ ಮತ್ತು ಭರತನಾಟ್ಯದಂತಹ ಉನ್ನತ ಕಲೆಗಳಲ್ಲಿ ಅಭಿರುಚಿಯಿದ್ದರೆ, ಕೆಳವರ್ಗದವರಿಗೆ ಅಂತಹ ಉನ್ನತ ಅಭಿರುಚಿ ಇರುವುದಿಲ್ಲ ಎಂದು ಬಿಂಬಿಸಿರುವುದು.

ಆದರೆ ಇದನ್ನು ವಿರೋಧಿಸಿದ ಬೂರ್ಡ್ಯೂ ಅಭಿರುಚಿಯೆಂಬುದು ಹುಟ್ಟಿನೊಂದಿಗೆ ಬರುವುದಲ್ಲ; ಅದು ವ್ಯಕ್ತಿಯೊಬ್ಬ (ಯಾವುದೇ ವರ್ಗದ) ಬೆಳೆಯುವಾಗ ತಾನು ಬೆಳೆಯುವ ಪರಿಸರದೊಂದಿಗೆ ರೂಢಿಸಿಕೊಳ್ಳುವುದು. ಆದ್ದರಿಂದ ಕೆಳವರ್ಗದಲ್ಲಿ ಹುಟ್ಟಿದ ಒಬ್ಬ ವ್ಯಕ್ತಿಗೆ ಒಳ್ಳೆಯ ಶಿಕ್ಷಣ ಒದಗಿಸಿ ಒಳ್ಳೆಯ ವಾತಾವರಣದಲ್ಲಿ ಬೆಳೆಸಿದರೆ ಆತ ಸ್ವಾಭಾವಿಕವಾಗಿಯೇ ಉತ್ತಮ ಅಭಿರುಚಿಗಳನ್ನು ರೂಡಿಸಿಕೊಳ್ಳುತ್ತಾನೆ. ಹಾಗಯೇ ಮೇಲ್ವರ್ಗದಲ್ಲಿ ಹುಟ್ಟಿದ ವ್ಯಕ್ತಿಗೆ ಶಿಕ್ಷಣ ಕೊಡದೆ, ಉತ್ತಮ ವಾತಾವರಣ ಒದಗಿಸದೆ, ಅವನಿಷ್ಟದಂತೆ ಬೆಳೆಯಲು ಬಿಟ್ಟರೆ ಆತನಲ್ಲಿ ಉತ್ತಮ ಅಭಿರುಚಿಗಳ ಕೊರತೆ ಎದ್ದು ಕಾಣುತ್ತದೆ.

ಹೀಗಾಗಿ ಒಬ್ಬ ವ್ಯಕ್ತಿಯ ಅಭಿರುಚಿಯೆಂಬುದು ಆತನ ಶಿಕ್ಷಣದ ಮಟ್ಟ, ಆತ ಬೆಳೆದಿರುವ ಪರಿಸರದಂತಹ ಅಂಶಗಳಿಂದ ಪ್ರಭಾವಿತವಾಗಿರುತ್ತದೆಯೇ ಹೊರತು ಆತ ಹುಟ್ಟಿರುವ ವರ್ಗದಿಂದಲ್ಲ; ಜೊತೆಗೆ, ಕೆಲವೊಮ್ಮೆ ಕೆಳವರ್ಗದ ಜನರು ತಾವೂ ಮೇಲ್ವರ್ಗದ ಜನರಂತೆಯೇ ವರ್ತಿಸಬೇಕು, ಆಗ ಸಮಾಜದಲ್ಲಿ ತಮಗೂ ಒಂದು ಬೆಲೆ ಸಿಗುತ್ತದೆ ಎಂಬ ಉದ್ದೇಶಗಳಿಂದ ಉನ್ನತ ಅಭಿರುಚಿಗಳನ್ನು ರೂಢಿಸಿಕೊಳ್ಳುತ್ತಾರೆಂಬುದನ್ನು ಬೂರ್ಡ್ಯೂ ತನ್ನ ಸಂಶೋಧನೆಯಲ್ಲಿ ಕಂಡುಕೊಂಡ.

ಸಂಸ್ಕೃತಿ ಅಧ್ಯಯನದಲ್ಲಿ ಅತ್ಯಂತ ಪ್ರಸ್ತುತವಾಗಿರುವ ಸಂಸ್ಕೃತಿ ಬಗೆಗಿನ ಪಿಯರಿ ಬೊರ್ಡೆಯುನ ವಿಶ್ಲೇಷಣೆಗಳು ಇಂದು ಅತ್ಯಂತ ಮಹತ್ವ ಪಡೆದುಕೊಂಡಿವೆ. ಸಂಸ್ಕೃತಿಯನ್ನು ತಮ್ಮದೇ ಆದ ವಿಭಿನ್ನ ಮತ್ತು ವಿಶಿಷ್ಟ ನೆಲೆಗಳಲ್ಲಿ, ದೃಷ್ಟಿಕೋನಗಳಲ್ಲಿ ವ್ಯಾಖ್ಯಾನಿಸುವ ಇಂತಹ ಪ್ರಯತ್ನಗಳು ನಡೆಯುತ್ತಲೇ ಬಂದಿವೆ; ಇಂದಿಗೂ ನಡೆಯುತ್ತಲೇ ಇವೆ.

*********

ಆಧಾರ:

1) Distinction: A Social Critique of the Judgement of Taste. (Translated by Richard Nice) 1984

2) Language and Symbolic Power(1991)

- ಸಿದ್ಧರಾಮಯ್ಯ ಡಿ.ಎಂ.
ಆಂಗ್ಲ ವಿಭಾಗ, ಸರ್ಕಾರಿ ಪದವಿ ಕಾಲೇಜು, ತಿಪಟೂರು
kalpasahyadri@gmail.com

"ನಮ್ಮ ಜೀವನಕ್ಕೆ ಅರ್ಥ ಕಂಡುಕೊಳ್ಳಲು ನಾವೇ ಜವಾಬ್ದಾರರಾಗಬೇಕಾಗುತ್ತದೆ."

– ಆಲ್ಬರ್ಟ ಕಮು

ಪಶು, ಪಕ್ಷಿ, ಪ್ರಾಣಿ, ಕ್ರಿಮಿ, ಕೀಟ ಇತ್ಯಾದಿ ಎಲ್ಲವೂ ಸಮಸ್ತ ಜೀವ ಜಾಲ. ಪ್ರಕೃತಿಯ ಅಸ್ತಿತ್ವಕ್ಕೆ ಅನುಗುಣವಾಗಿ ಜೀವರಾಶಿಗಳಿಗೆ ಹುಟ್ಟು, ಬದುಕು, ಸಾವು ಸಹಜ ಪ್ರಕ್ರಿಯೆ. ಸಂತಾನ ಪ್ರಾಪ್ತಿ, ಪೋಷಣೆ, ಹಸಿವು, ನೀರಡಿಕೆ, ನಿದ್ರೆ, ಸಹಜ ಗುಣಗಳು. ಆದರೆ ಸೃಷ್ಟಿಯ ಯಾವ ಜೀವಿಯೂ ಮನುಷ್ಯನಷ್ಟು ಕನಸು, ಉದ್ದೇಶ, ಗುರಿ, ಆದರ್ಶಗಳ ಬೆನ್ನು ಹತ್ತುವುದಿಲ್ಲ. ಮನುಷ್ಯನಿಗೂ, ಹುಟ್ಟು-ಬದುಕು, ಸಾವು ಸಹಜವಾದರೂ ತಾನು ಬುದ್ಧಿಜೀವಿ, ವಿಶಿಷ್ಟ ಎಂದು ಗ್ರಹಿಸಿ ತನ್ನ ಉಪಯುಕ್ತತೆಗೆಂದೇ ಪ್ರಕೃತಿಯನ್ನು ಗೆಲ್ಲುವ ಅಧೀನ ಮಾಡಿಕೊಳ್ಳುವ ಸಾಹಸಕ್ಕಿಳಿಯುತ್ತಾನೆ. ವೈಚಾರಿಕ ಅಹಂಕಾರ, ಸಿದ್ಧಾಂತದ ಅಮಲು, ಕೀರ್ತಿ ಕಾಮನೆ, ಲೈಂಗಿಕ ಲಾಲಸೆ, ವ್ಯಸನಗಳು, ದೈವ ಸಾಕ್ಷಾತ್ಕಾರ, ಮೋಕ್ಷದ ಹಂಬಲ, ಆಧ್ಯಾತ್ಮದ ತರ್ಕ-ವಿತರ್ಕಗಳು, ಅಹಂ, ಪ್ರತಿಷ್ಠೆ, ಸರ್ವಾಧಿಕಾರಿ ಧೋರಣೆ, ಧನದಾಹ, ಕುಟುಂಬದ ಮೋಹ, ಕಾಮ, ಪ್ರೇಮ ಇತ್ಯಾದಿಗಳು ವೈಯುಕ್ತಿಕ ಮಟ್ಟದಲ್ಲಿ ಗ್ರಹಿಸಿ ತುಡಿಯುವ ಸಂಗತಿಗಳು. ನೆಲ, ಜಲ, ಭಾಷೆ, ರಾಷ್ಟ್ರ, ಜನಾಂಗದ ಮೇಲಿನ ವ್ಯಾಮೋಹ ಇತ್ಯಾದಿಗಳು ಸಮಷ್ಟಿ ಮನಸ್ಸಿನ ಕಾರ್ಯಕ್ಷೇತ್ರಗಳು. ಈ ಎಲ್ಲಾ ಅಸಂಖ್ಯಾತ ಬಯಕೆಗಳಲ್ಲಿ ಸೂಕ್ತವಾದವುಗಳನ್ನು ಸ್ವಭಾವಕ್ಕೆ ಸಾಧ್ಯತೆಗೆ ತಕ್ಕಂತೆ ಆಯ್ಕೆ ಮಾಡಿಕೊಳ್ಳುವ ಹೊಣೆಗಾರಿಕೆ ಇರಲೇ ಬೇಕು. ಇಲ್ಲವಾದರೆ ತನ್ನ ಪಥನಕ್ಕೆ ತಾನೇ ಕಾರಣವಾಗುತ್ತಾನೆ.

ಈ ಹಿನ್ನಲೆಯಲ್ಲಿ, "ನಮ್ಮ ಜೀವನಕ್ಕೆ ಅರ್ಥ ಕಂಡುಕೊಳ್ಳಲು ನಾವೇ ಜವಾಬ್ದಾರರಾಗಬೇಕಾಗುತ್ತದೆ." ಎನ್ನುವ ಮಾತು ಅರ್ಥಪೂರ್ಣ. ತನ್ನ ಇತಿಮಿತಿ ಅರಿತು ಬದುಕಿನ ಅರ್ಥ ಕಂಡುಕೊಳ್ಳುವಲ್ಲಿ ಸಮತೋಲನ ಕಾಯ್ದುಕೊಳ್ಳದೇ ಒಂದು ಎಳೆ ತೂಕ ತಪ್ಪಿದರೂ ದುರಂತ. ಏಕೆಂದರೆ ಆಸೆಗಳಿಗೆ ಕೊನೆಯೇ ಇಲ್ಲ. ಆಸೆಗಳು ಶಕ್ತಿಯನ್ನು ಹಿಂಡುತ್ತವೆ. ಬುದ್ಧ ಹೇಳಿದಂತೆ "ಆಸೆಯೇ ದುಃಖಃಕ್ಕೆ ಮೂಲ." ತನ್ನ ಉದ್ದೇಶ ಸಾಧನೆಯಲ್ಲಿ ವಿವೇಕ ಅತಿ ಮುಖ್ಯ. ವಿವೇಕ ಎಂದರೆ ಸತ್ಯವನ್ನು ಕಂಡುಕೊಳ್ಳುವ ಸಾಮರ್ಥ್ಯ. ಜಾಗೃತಿ ಮತ್ತು ಪ್ರಜ್ಞೆಯಿಂದ ವಿವೇಕದ ಅರಿವು ಬರುತ್ತದೆ. ಜಾಗೃತರು ಅಸ್ತಿತ್ವದೊಂದಿಗೆ ಜೀವಿಸುವರು. ಜೀವನದ ಅರ್ಥ ದಕ್ಕಿಸಿಕೊಳ್ಳುವವರು.

ಮನುಷ್ಯರ ಜೀವನದಲ್ಲಿ ಶಾಂತಿ ಸಮಾಧಾನದ, ನೆಮ್ಮದಿಯ ಮಾನವೀಯ ಸಂಬಂಧಗಳನ್ನುಳ್ಳ ಅರ್ಥಪೂರ್ಣ ಬದುಕನ್ನು ಜೀವಿಸಲು ಅದಕ್ಕೆ ಪೂರಕವಾದ ಸಮಾಜ ನಿರ್ಮಿಸಲು ಅನೇಕರು ಶ್ರಮಿಸಿದ್ದಾರೆ. ಉದಾಹರಣೆಗೆ ಸಾಕ್ರೆಟೀಸ್, ಏಸು, ಗಾಂಧಿ, ಬಸವ ಇತ್ಯಾದಿ. ಅವರ ಹೋರಾಟದ ಪರಿಣಾಮ ಗಮನಿಸಿದರೆ ಅವರ ಹೋರಾಟ ಕೂಡ ವಿಫಲವೇ? ತನ್ನ ಸುತ್ತ ವಿವೇಕದ ಅರಿವು ಮೂಡಿಸಲು ಪ್ರಯತ್ನಿಸಿದ ಸಾಕ್ರೆಟೀಸ್ ಅಥೆನ್ಸಿನ ನ್ಯಾಯಧಿಕರಣ ನೀಡಿದ ತೀರ್ಪಿಗೆ ತಲೆಬಾಗಿ ನಂಜನ್ನು ನುಂಗಿದ. ಪ್ರೀತಿಯ, ಜೀವ ಕಾರುಣ್ಯದ ಬದುಕನ್ನು ರೂಪಿಸಲು ಯತ್ನಿಸಿದ ಏಸು ಶಿಲುಬೆಗೆ ಗುರಿಯಾದ. ಅಹಿಂಸಾ ಮಾರ್ಗ ಹಿಡಿದು ಸ್ವತಂತ್ರಕ್ಕಾಗಿ ಹೋರಾಡಿ ಸುಖೀರಾಜ್ಯದ ಕನಸು ಕಂಡ ಗಾಂಧಿ ಸ್ವಾತಂತ್ರ್ಯ ಪಡೆದ ಕ್ಷಣದಲ್ಲೇ ಹಿಂಸೆಯ ಕ್ರೌರ್ಯವನ್ನು ಕಾಣಬೇಕಾಯಿತು. ವರ್ಗ-ಜಾತಿ ರಹಿತ ಸಮಾನತೆಗಾಗಿ ತುಡಿದ "ದಯವಿಲ್ಲದ ಧರ್ಮವಾವುದಯ್ಯ" ಎಂದ ಬಸವ ಮತಾಂಧತೆಯ ಕಾರಣದಿಂದ ಕಲ್ಯಾಣವನ್ನು ತೊರೆಯಬೇಕಾಯಿತು. ಇವರೆಲ್ಲರೂ ಪೂರ್ವಾಗ್ರಹಿತ ಹಿತಾಸಕ್ತರ, ಮೂಲಭೂತವಾದಿಗಳ ಅಹಂಗೆ ಬಲಿಯಾದರು. ಅನ್ನಕರನಿನಾ ಕಾದಂಬರಿಯಲ್ಲಿ ಟಾಲ್‌ಸ್ಟಾಯ್ ಕೇಳಿರುವ ಪ್ರಶ್ನೆ ಎಲ್ಲಾ ಕಾಲಕ್ಕೂ ಪ್ರಸ್ತುತ. "ಯಾರಿಗೆ ಜೀವನದ ಅರ್ಥ ದಕ್ಕುತ್ತದೆ? ತನ್ನ ಸ್ವಂತಕ್ಕೆ? ತನ್ನ ಜೊತೆಯಿರುವವರಿಗೆ? ನಿಸರ್ಗ ಮತ್ತು ದೇವರುಗಳೊಂದಿಗೆ ಏಕಕಾಲಕ್ಕೆ ಅರ್ಥ ಪೂರ್ಣವಾಗುವಂತಹ ಸಂಬಂಧಗಳನ್ನು ಕುದುರಿಸಿಕೊಳ್ಳಲು ಅವಕಾಶಗಳನ್ನು ಕೊಡುವ ಸಮಾಜವನ್ನು ಮನುಷ್ಯ ಇಲ್ಲಿನವರೆಗೂ ನಿರ್ಮಿಸಲು ಆಗಿಯೇ ಇಲ್ಲವೇ?"



– ಬಸವರಾಜು ಕೆ.ಆರ್

# ಶೈಲಿ-ರೂಪ:



# ಪ್ರಾಸ



ಇಂಗ್ಲೀಷ್ ನಲ್ಲಿ ಸುಮಾರು ಪದಗಳಿದ್ದರೂ , ಅವೆಲ್ಲವೂ ಇಂಗ್ಲೀಷ್ ನ ಧ್ವನಿಗಳ ಸಂಯೋಜನೆ ಹಾಗು ಪರಿವೃತ್ತಿಗಳು. ಭಿನ್ನ ಧ್ವನಿಗಳು ಅಥವಾ ಸ್ಪಷ್ಟ ಧ್ವನಿಗಳು ಒಂದು ಭಾಷೆಯಲ್ಲಿ ಕೆಲವೇ ಇರುವುದರಿಂದ ಅವುಗಳು ಅನಿವಾರ್ಯವಾಗಿ ಮನರಾವರ್ತನೆಯಾಗುತ್ತಿರುತ್ತವೆ. ಸಾಮಾನ್ಯ ಸಂಭಾಷಣೆಯಲ್ಲಿ ಈ ಧ್ವನಿಗಳು ಯಾವುದೇ ಕ್ರಮವಿಲ್ಲದೆ ಸಂಭವಿಸುತ್ತಿ ರುತ್ತವೆ. ಈ ಭಿನ್ನ ಧ್ವನಿಗಳನ್ನು ಕ್ರಮವಾಗಿ ಜೋಡಿಸುವುದು ಮಾತುಗಾರನಿಗೆ ಅಥವಾ ಬರಹಗಾರನಿಗೆ ಸಾಧ್ಯವಿದೆ. ಇಂತಹ ಜೋಡಣೆಯಿಂದ ಹಲವಾರು ಮನರಾವೃತ್ತಿ ಹಾಗು ಪರಿವೃತ್ತಿಗಳನ್ನು ಸೃಷ್ಟಿಸಿ ನಿರ್ಧಿಷ್ಟ ಪರಿಣಾಮಗಳನ್ನು ಪ್ರದರ್ಶಿಸಬಹುದಾಗಿದೆ.

ಕಾವ್ಯದಲ್ಲಿ ಧ್ವನಿ ವಿನ್ಯಾಸಗಳನ್ನು ತಿಳಿದುಕೊಳ್ಳಬೇಕಾದರೆ, ಧ್ವನಿಗುಚ್ಛಗಳ (syllables) ರಚನೆಯನ್ನು ತಿಳಿದುಕೊಳ್ಳುವುದು ಪ್ರಯೋಜನಕಾರಿ ಯಾಗಿದೆ. ಈ ಧ್ವನಿಗುಚ್ಛಗಳನ್ನು c-v-c ಎಂದು ವಿವರಿಸಬಹುದಾಗಿದೆ. C ಎಂದರೆ consonant ಅಥವಾ consonant group ಆಗಿರಬಹುದು. V ಅಂದರೆ vowel ; (ಸ್ವರ ಅಥವಾ dipthong : ಸಂಯುಕ್ತ ಸ್ವರ) ಆಗಬಹುದು.

ಈ ಕೆಳಗಿನ ಪದಗಳು ಒಂದೇ syllable ಗಳಿರುವಂಥಹವು. ಏಕೆಂದರೆ ಇಲ್ಲಿ ಒಂದೇ c-v-c ಅನ್ನು ಈ ಪದಗಳಲ್ಲಿ ಕಾಣುತ್ತೇವೆ. ಉದಾಹರಣೆಗೆ:

| C | V | C | |
|---|---|---|---|
| /sp/ | /ɒ/ | /t/ | - Spot |
| | /i/ | /n/ | - in |
| | /ai/ | | -I |

ಈ ಕೆಳಗಿನ ಪದಗಳು ಒಂದಕ್ಕಿಂತ ಹೆಚ್ಚು syllable ಗಳನ್ನು ಹೊಂದಿವೆ.

| C | V | C | V | C | |
|---|---|---|---|---|---|
| /b/ | /I/ | /g/ | /I/ | /n/ | - begin |
| /b/ | /I/ | /k/ | /eI/ | /m/ | - became |

ಉಚ್ಚರಿಸಲು ತೆಗೆದುಕೊಳ್ಳುವ ಸಮಯ ಮತ್ತು ಧ್ವನಿಯ ಸ್ಥಳವನ್ನು ಆಧರಿಸಿ ಹಲವಾರು ಬಗೆಯ ಧ್ವನಿ ನಮೂನೆಗಳನ್ನು ಅಥವಾ ವಿನ್ಯಾಸಗಳನ್ನು ಕಾಣಬಹುದು.

ಕೆಲವು ಧ್ವನಿ ವಿನ್ಯಾಸಗಳು ಈ ಕೆಳಗಿನಂತಿವೆ.

***Alliteration:***

1. ಹತ್ತಿರದ ಪದಗಳ ಮೊದಲ ವ್ಯಂಜನ ಅಥವಾ ವ್ಯಂಜನ ಗುಚ್ಛಗಳ ಧ್ವನಿಗಳು ಮನರಾವೃತ್ತಿಯಾಗುತ್ತಿದ್ದರೆ ಅದನ್ನು Alliteration ಎನ್ನುತ್ತೇವೆ. ಉದಾ: Boat, big, bad etc. ಸಮೀಪದ ಪದದಲ್ಲಿನ ಮೊದಲ stress ಭಾಗದ ಧ್ವನಿ ಮನರಾವರ್ತನೆಯಾಗುತ್ತಿದ್ದರೆ ಅದನ್ನೂ ಸಹ Alliteration ಅನ್ನುತ್ತೇವೆ. ಉದಾ: Aggression, ungreatful etc.

2. ಸಮೀಪದ ಪದಗಳ Stressed syllable ಗಳಲ್ಲಿನ ಒಂದೇ ಸ್ವರದ ಧ್ವನಿ ಮನರಾವರ್ತನೆಯಾಗುತ್ತಿದ್ದರೆ ಅದನ್ನು Assonance ಅನ್ನುತ್ತೇವೆ.

3. ಸಮೀಪದ ಪದಗಳ ಕೊನೆಯ ವ್ಯಂಜನ ಅಥವಾ ವ್ಯಂಜನ ಗುಂಪುಗಳ ಧ್ವನಿ ಮನರಾವರ್ತನೆಯಾಗುತ್ತಿದ್ದರೆ ಅದನ್ನು Consonanace ಎನ್ನುತ್ತೇವೆ.

4.Reverse Rhyme: ಸಮೀಪದ ಪದಗಳಲ್ಲಿ ಮೊದಲ ವ್ಯಂಜನ ಹಾಗು ಸ್ವರ ಎರಡರ ಧ್ವನಿ ಮನರಾವರ್ತನೆ ಯಾದರೆ ಅದನ್ನು Reverse Rhyme ಎನ್ನುತ್ತೇವೆ.

5. Para Rhyme: ಸಮೀಪದ ಪದಗಳ ಮೊದಲ ಹಾಗು ಅಂತಿಮ ವ್ಯಂಜನ ಎರಡರ ಧ್ವನಿಗಳ ಮನರಾವರ್ತನೆಯಗುತ್ತಿದ್ದರೆ ಅದನ್ನು Para Rhyme ಅನ್ನುತ್ತೇವೆ. ಉದಾ: send and sound, beat and bite

6. Rhyme: ಇಲ್ಲಿ ಸಮೀಪದ ಪದಗಳ ಅಂತಿಮ ಸ್ವರ ಹಾಗು ಅಂತಿಮ ವ್ಯಂಜನ/ವ್ಯಂಜನ ಗುಂಪು ಮನರಾವರ್ತನೆಯಾಗುತ್ತಿರುತ್ತದೆ. ಉದಾ: cloud and shroud, bending with sending. ಪ್ರಾಸ (Rhyme) ಗಳು ವಾಕ್ಯದ ಮಧ್ಯದಲ್ಲಿ ಬಂದರೆ internal rhyme ಎಂತಲೂ ಕೊನೆಯಲ್ಲಿ ಬಂದರೆ end rhyme ಎಂತಲೂ ಕರೆಯುತ್ತೇವೆ.

7. ಧ್ವನಿ ವಿನ್ಯಾಸದ ಕಾರ್ಯ: ಧ್ವನಿ ವಿನ್ಯಾಸವೆಂದು ಕರೆಸಿಕೊಳ್ಳಬೇಕಾದರೆ ಧ್ವನಿಗಳ ಮನರಾವರ್ತನೆ ಹತ್ತಿರದ ಪದಗಳಲ್ಲಿಯೇ ಆಗಬೇಕು, ದೂರದ ಪದಗಳಲ್ಲಾದರೆ ಅವುಗಳನ್ನು ನಾವು ಗುರುತಿಸುವುದಿಲ್ಲ. ಧ್ವನಿ ವಿನ್ಯಾಸಗಳನ್ನು ಪದಗಳ ಧ್ವನಿಯಲ್ಲಿ ಗುರುತಿಸಬೇಕೇ ಹೊರತು ಅಕ್ಷರಗಳಲ್ಲಿ ಅಲ್ಲ. ಧ್ವನಿ ವಿನ್ಯಾಸಗಳು ಪದಗಳನ್ನು ಒಂದು ಘಟಕವಾಗಿ ಇಂತಹ ಜೋಡಣೆ ನೆನಪನ್ನು ಹೆಚ್ಚಿಸುತ್ತದೆ. ಗಾದೆಗಳಲ್ಲಿ, ಪ್ರಖ್ಯಾತ ನಾಣ್ಣುಡಿಗಳಲ್ಲಿ, ನುಡಿಗಟ್ಟು ಹಾಗು ಘೋಷಣೆಗಳಲ್ಲಿ ಇಂತಹ ಧ್ವನಿ ವಿನ್ಯಾಸಗಳನ್ನು ಸೃಷ್ಟಿಸುತ್ತವೆ. ಧ್ವನಿವಿನ್ಯಾಸವು ಕೆಲವು ಪಠ್ಯಗಳಿಗೆ

ಪರಿಣಾಮ ಕಾರಿಯಾದ ಪ್ರಾಧಾನ್ಯತೆಯನ್ನು ನೀಡುವುದಲ್ಲದೆ, ಗಾಂಭೀರ್ಯ ಹಾಗು ಉದಾತ್ತತೆಯ ಭಾವನೆಯನ್ನು ವ್ಯಕ್ತಪಡಿಸಲು ಸಹಾಯ ಮಾಡುತ್ತದೆ. ಧ್ವನಿ ವಿನ್ಯಾಸಗಳು ಪಠ್ಯದಲ್ಲಿ ಸಮಾಂತರತೆ (parallelism) ಗೆ ಸಹಾಯ ಮಾಡುತ್ತದೆ. ಧ್ವನಿವಿನ್ಯಾಸವು ಸಾಂಕೇತಿಕವಾಗಿ ಅರ್ಥದ ಗೂಢಾರ್ಥವನ್ನು ಪ್ರತಿನಿಧಿಸುತ್ತದೆ. ಅರ್ಥದ ಕಂಪನವನ್ನು ತಿಳಿದುಕೊಳ್ಳಲು ಸೂಕ್ಷ್ಮಗಳನ್ನು ನೀಡುತ್ತದೆ.

**ಈ ಕೆಳಕಂಡ ಪದ್ಯದಲ್ಲಿ ವಿವಿಧ ರೀತಿಯ ಪ್ರಾಸಗಳನ್ನು ಗುರುತಿಸಲಾಗಿದೆ:**

It was the frogge in the well
Humble dum, humble dum
= Reverse rhyme
And the merrie mouse in the mill
= Alliteration
Tweedle, tweedle, twino
= Alliteration
The frogge would a woing ride
= Reverse rhyme
Humble dum, humble dum
Sword and buckler by his side
Tweedle, tweedle, twino.
When he was upon his high horse set
= Alliteration

*******

**ಆಧಾರ:**

Martin Montgomery, Alan Durant, Nigel Fabb, Tom Furniss and Sala Mills, "Ways of Reading", London and Newyork, Routledge, 1992.

********



– ಜ್ಯೋತಿ ಕೆ.ಬಿ.
ಆಂಗ್ಲ ವಿಭಾಗ,
ಸರ್ಕಾರಿ ಪದವಿ ಕಾಲೇಜು, ಗುಬ್ಬಿ

## ಕವಿತೆ — ಕಳೆದುಹೋದ ಕಂಗಳೊಳಗೆ ಸಾವಿರ ಸಾವಿರ ಕನಸುಗಳಿದ್ದವು

ಅದೊಂದು ಸಂಜೆ
ತಂಗಾಳಿಗೆ ದೇಹಗಳನೊಡ್ಡಿ
ಚರ್ಚಿನೆದುರಿನ ರಸ್ತೆಗಿಳಿದಿದ್ದೆವು ನಾನು ಮತ್ತು ಅವಳು
ರಸ್ತೆಗುಂಟ ನಮ್ಮೊಂದಿಗೇ
ಗುಲ್ ಮೊಹರ್ ಮೇಫ್ಲವರ್‌ನ ಉದ್ದದ ಮೆರವಣಿಗೆ
ಒಂದೇ ಕೊಡೆ ಹಂಚಿ
ಕಾಫೀಕ್ಲಬ್ಬಿಗೆ ಹೊರಟು ನಿಂತದ್ದು ನೋಡಿ
ಇಳಿಸಂಜೆಯೂ ನಕ್ಕಿತ್ತು!
ಸುತ್ತಲಿನ ಕಣ್ಣುಗಳಲ್ಲಿ ಬೆಂದು ಹೋದೆವು
ತಂಗಾಳಿಯಲ್ಲೂ ಬೆವರಿ
ಕಾಲು ಇಟ್ಟದ್ದೇ ದಾರಿಯಾಗಿ
ನಡೆದೂ ನಡೆದೆವು ನಾವು
ಮುಗುಳ್ನಗುತ್ತ ಕೆನ್ನೆ ಕುಳಿಗೆ ಜಾರಿಸಿ
ಕಣ್ಣೇ ಮಾತಾಗಿ ಒದ್ದೆಯಾದಳು ಮೋಹಕ ಚಲುವೆ
ಹಾದಿತುಂಬ ಹರಡಿನಿಂತ ಗುಲ್‌ಮೊಹರ್
ಕಾದನೆಲಕೆ ತಂಪೆರೆವ ಜಿನುಗು ಮಳೆ
ಪಿಸುಗುಟ್ಟುವ ತಂಗಾಳಿ
ಮಳೆಯ ನೆಪಕ್ಕಂಟಿದ ಕೊಡೆ
ಕಾಲಂದುಗೆಯ ಘಲುಘಲು ಸದ್ದು
ಎದೆಯಲ್ಲಿ ಕಚಗುಳಿಯಿಟ್ಟ ಪಿಸುದನಿ
ನಮ್ಮನೇ ದಿಟ್ಟಿಸುವ ಆಕಾಶ
ಬೊಚ್ಚುಬಾಯಿ ಬಿಟ್ಟು ಪ್ರತಿಸಂಜೆ ವಾಕ್ ಮಾಡುವ
ಅವವೇ ಜೋಡಿಗಳು
ಎಲ್ಲಕೂ ಸೂರ್ಯನೇ ಸಾಕ್ಷಿ
ಕಣ್ಣ ಆಳಕ್ಕಿಳಿದ ಅವಳೊಂದಿಗೆ ಕಾಫಿ ಹೀರುವ ಬೆಚ್ಚನೆ ಬಯಕೆ
ಬಯಕೆಯಾಗಿಯೇ ಉಳಿಯಿತು ಕೊನೆಗೂ
ಕದ ಮುಚ್ಚಿತು
ಆಸೆ ಕಂಗಳು ದಾರಿ ಕಾದವು
ಕಳೆದುಹೋದ ಕಂಗಳೊಳಗೆ
ಸಾವಿರ ಸಾವಿರ ಕನಸುಗಳಿದ್ದವು
ನೀ ಜೊತೆಗಿದ್ದಿದ್ದರೆ ಪುಟ ತೆರೆದಷ್ಟೂ ಓದುವ ರಾಶಿ
ರಾಶಿ ಅಕ್ಷರಗಳಿದ್ದವು.

– ಡಾ.ಎ.ರಘುರಾಂ, ಸಹ ಪ್ರಾಧ್ಯಾಪಕರು,
ಸರ್ಕಾರಿ ಪದವಿ ಕಾಲೇಜು, ದಂಡಿನಶಿವರ,



ಪ್ರಸ್ತುತ

# ಮಾಗಿಯ ಕಥೆಯಲ್ಲಿ ಮಾಗಿದ ಮನಸ್ಸು: ಷೇಕ್ಸ್‌ಪಿಯರ್ ನ Winter's Tale

ವಿಶ್ವ ನಾಟಕದ ರಚನೆಯ ಪ್ರಯಾಣದಲ್ಲಿ ಷೇಕ್ಸಪಿಯರ್‌ನ ೩೭ ಹೆಜ್ಜೆಗಳು ಮನುಕುಲದ ನಾಗರೀಕತೆಯ ಹೃದಯದಲ್ಲಿ ಹೆಗ್ಗುರುತುಗಳಾಗಿವೆ. ಕಾಲದಿಂದ ಕಾಲಕ್ಕೆ ಈ ಗುರುತುಗಳು ಮಾನವನ ಅರಿವಿನ ಗುರುಗಳಾಗಿವೆ. ಅವನ ಕೊನೆಯ ಮೂರು ನಾಟಕಗಳಾದ Winter's Tale, Cymbeline, The Tempest ಗಳು ಗ್ರೀಕ್ ರೊಮ್ಯಾನ್ಸ್ ಗಳನ್ನು ಹೋಲುತ್ತವೆಂದು ವಿಮರ್ಶಕರು ತಿಳಿಸಿದ್ದಾರೆ. ಬಹುಕಾಲ ಗಂಭೀರ ನಾಟಕಗಳನ್ನು ರಚಿಸಿದ ಷೇಕ್ಸಪಿಯರ್‌ನ ಮನಸ್ಸು ಇಲ್ಲಿ ಶಾಂತಿಯನ್ನು ಬಯಸುತ್ತಿದೆ. ಮುಪ್ಪಿನ ಘಟ್ಟದಲ್ಲಿ ಸಹಜವಾಗಿ ಬದುಕಿನ ಎಲ್ಲಾ ಮಜಲುಗಳನ್ನು ದಾಟಿದ ಕಾರಣ ನಾಟಕಕಾರನ ಮನಸ್ಸು ಮಾಗಿದೆ. ಈ ಸಂದರ್ಭದಲ್ಲಿ ರಚಿತವಾಗಿರುವ ನಾಟಕವು ರೊಮ್ಯಾನ್ಸ್ ಕಥಾವಸ್ತುವನ್ನು ಒಳಗೊಂಡಿದೆ. ಈ ನಾಟಕದಲ್ಲಿನ ಪ್ರಾರಂಭ ಗಂಭೀರವಾಗಿದ್ದರೂ ಅನೇಕ ಬದಲಾವಣೆಗಳ ನಂತರ ಆನಂದ ದಾಯಕವಾಗಿ ಮುಕ್ತಾಯವಾಗುತ್ತದೆ.

ಪ್ರಸ್ತುತ ನಾಟಕದ ಕಥಾನಾಯಕನಾದ ದೊರೆ Leontes ಗಂಭೀರವಾದ ತಪ್ಪನ್ನು ಮಾಡುತ್ತಾನೆ. ತನ್ನ ತಪ್ಪಿನ ಅರಿವೇ ಅವನ ಅಸ್ತಿತ್ವದ ಭಾಗವಾಗಿ, ನಿರಂತರ ಪಶ್ಚಾತ್ತಾಪ-ಪ್ರಾಯಶ್ಚಿತಗಳಿಂದ ಪರಿವರ್ತನೆಗೊಂಡು ಕೊನೆಗೆ ಅಗಲಿದ ಸಂಬಂಧಗಳನ್ನು ಆನಂದದಿಂದ ಆಲಂಗಿಸುತ್ತಾನೆ.

ಈ ಲೇಖನವು ಷೇಕ್ಸಪಿಯರ್‌ನ Winter's Tale ನಾಟಕದಲ್ಲಿ ಕಥಾನಾಯಕನಾದ ರಾಜ Leontes ನ ಪಾತ್ರವು ಹೇಗೆ ಮನುಷ್ಯನಲ್ಲಿ ಉಂಟಾಗುವ ಅನುರಾಗ, ಸ್ನೇಹ-ದ್ವೇಷ. ಪಶ್ಚಾತ್ತಾಪ-ಪ್ರಾಯಶ್ಚಿತ-ಪುನರ್ ಪರಿಶೀಲನೆ ಮತ್ತು ಹೊಂದಾಣಿಕೆಯು ಬದುಕನ್ನು ಬಿಂಬಿಸುತ್ತದೆ ಎಂಬುದನ್ನು ಅರಿಯಲು ಪ್ರಯತ್ನಿಸುತ್ತದೆ. ಸಿಸಿಲಿಯ ರಾಜ ಲಿಯೋನ್ಟಸ್ ಮತ್ತು ಬೊಹಿಮಿಯಾದ ರಾಜ ಪಾಲಿಕ್ಸೆನಿಸ್ ಬಾಲ್ಯ ಸ್ನೇಹಿತರು. ಒಮ್ಮೆ ಪಾಲಿಕ್ಸೆನಿಸ್ ಅನೇಕ ವರ್ಷಗಳ ನಂತರ ಗೆಳೆಯನ ಮನೆಗೆ ಆಕಸ್ಮಿಕವಾಗಿ ಭೇಟಿ ನೀಡುತ್ತಾನೆ. ಇದೊಂದು ಅವಿಸ್ಮರಣೀಯವಾದ ಭೇಟಿಯಾಗಿರುತ್ತದೆ. ಕುಶಲೋಪರಿಯ ನಂತರ ತನ್ನ ರಾಜ್ಯವಾದ ಬೋಹಿಮಿಯಾಕ್ಕೆ ಹೊರಟು ನಿಂತ ಗೆಳೆಯನನ್ನು ಲಿಯೋನ್ಟಸ್ ಕೆಲವು ದಿನಗಳಾದರೂ ತನ್ನೊಡನೆ ಕಾಲಕಳೆಯಬೇಕೆಂದು ಹಂಬಲದಿಂದ ಕೇಳಿಕೊಳ್ಳುತ್ತಾನೆ.




ಗೆಳೆಯ ತನ್ನ ಮಾತಿಗೆ ಒಪ್ಪದ ಕಾರಣ ತನ್ನ ರಾಣಿ ಹರ್ಮಿಯೋನ್‌ಳಿಗೆ ಪಾಲಿಕ್ಸೆನಿಸ್ ನ ಮನ ಒಲಿಸುವಂತೆ ಕೇಳಿಕೊಳ್ಳುತ್ತಾನೆ. ಅನೇಕ ಪ್ರಯತ್ನಗಳ ನಂತರ ಪಾಲಿಕ್ಸೆನಿಸ್ ಗೆಳೆಯನ ಆತಿಥ್ಯಕ್ಕೆ ಮಣಿದು ಸರಿಸುಮಾರು ನವಮಾಸಗಳ ಕಾಲ ಸ್ನೇಹಿತನ ಮನೆಯಲ್ಲಿ ತಂಗುತ್ತಾನೆ. ಈ ಸಂದರ್ಭದಲ್ಲಿ ರಾಜನ ಸ್ನೇಹವು ಮೊದಲು ಅನುಮಾನ, ಬೇಸರ ನಂತರ ದ್ವೇಷಕ್ಕೆ ತಿರುಗುತ್ತದೆ. ತನ್ನ ರಾಣಿ ಮತ್ತು ಗೆಳೆಯನ ಸಂಬಂಧವು ಸಂಶಯಕ್ಕೆ ಕಾರಣವಾಗುತ್ತದೆ. At my request he would not ಎಂಬ ಲಿಯೋನ್ಟಸ್ ಮಾತು ಆತನ ಅನುಮಾನದ ತೀಕ್ಷ್ಣತೆ ಮತ್ತು ತೀವ್ರತೆಯನ್ನು ಬಿಂಬಿಸುತ್ತದೆ. ಪಾಲಿಕ್ಸೆನಿಸ್ ಮತ್ತು ಹರ್ಮಿಯೋನ್ ಅವರ ಈ ೯ ತಿಂಗಳ ಧೀರ್ಘಕಾಲದ ಅನ್ಯೋನ್ಯತೆಯು ಲಿಯೋನ್ಟಸ್ ರಾಜನ ದ್ವೇಷವನ್ನು ಮತ್ತಷ್ಟು ಪುಷ್ಠೀಕರಿಸುತ್ತದೆ. ರಾಜನು ತನ್ನ ಗೆಳೆಯನನ್ನು ಕೊಲ್ಲಿಸುವಷ್ಟರ ಮಟ್ಟಿಗೆ ಕೆಟ್ಟ ಪ್ರಚೋದನೆಗೊಳಗಾಗುತ್ತಾನೆ. ತನ್ನ ಹೃದಯ ಸಾಮ್ರಾಜ್ಯದ ಅಧಿದೇವತೆಯಾದ ಹರ್ಮಿಯೋನಳನ್ನು ಅನುಮಾನಿಸಿ ಕಾರಾಗೃಹದಲ್ಲಿಡುತ್ತಾನೆ. ನವಮಾಸಗಳ ನಂತರ ಜನಿಸಿದ Perdita ಳನ್ನು ದೂರದ ಬೊಹಿಮಿಯಾದ ಕಾಡಿಗೆ ಬಿಡಲು ಚಿಂತಿಸುತ್ತಾನೆ. ತನ್ನ ರಾಜಾಜ್ಞೆಯನ್ನು ಮೀರದ ಮಂತ್ರಿಗಳಾದ ಆಂತಿಗೋನಸ್ ಮತ್ತು ಕ್ಯಮಿಲಿಂಯೋರನ್ನು ಈ ಕಾರ್ಯಗಳನ್ನು

ನಿರ್ವಹಿಸಲು ನೇಮಿಸುತ್ತಾನೆ. ಮಾನವೀಯ ನೆಲೆಯಲ್ಲಿ ಪಾಲಿಕ್ಸೆನಿಸ್‌ನಿಗೆ ವಾಸ್ತವ ವಿಷಯವನ್ನು ತಿಳಿಸಿ ಬೊಹಿಮಿಯಾಕ್ಕೆ ಪಲಾಯನ ಮಾಡಲು ಕ್ಯಮಿಲಿಯೋ ಸಹಕರಿಸುತ್ತಾನೆ.

ವಾಸ್ತವಾಂಶವನ್ನು ಅರಿಯದೆ ಲಿಯೋನ್ಟಸ್‌ನು ನಿಷ್ಕಾರಣವಾಗಿ ತನ್ನ ಇಡೀ ಸಾಮ್ರಾಜ್ಯವನ್ನೇ ಗೊಂದಲಕ್ಕೀಡು ಮಾಡುತ್ತಾನೆ ಹಾಗು ತಾನೇ ನಿರ್ಮಿಸಿಕೊಂಡ ಅಶಾಂತಿಯ ಗೂಡಿನಲ್ಲಿ ಪರಿತಪಿಸುತ್ತಾನೆ. ರಾಜನ ನಕಾರಾತ್ಮಕ ಗ್ರಹಿಕೆಯು ಮಾನವ ಸಂಬಂಧಗಳನ್ನು ವಿಚಲಿತಗೊಳಿಸಿ, ಪೂರ್ವಕಲ್ಪಿತ, ಅವಾಸ್ತವಿಕತೆಯು ಯಾರನ್ನೂ ನಂಬದ ಸ್ಥಿತಿಗೆ ನೂಕುತ್ತದೆ. ತನ್ನ ಆರಾಧ್ಯ ದೈವವಾಣಿಯಾದ Oracle ಮಾತುಗಳನ್ನು ತಿರಸ್ಕರಿಸಿ, ತಾನು ತಿಳಿದ ಜ್ಞಾನವೇ ಸಿಂಧುವೆಂದು, ತನ್ನನೇ ತಾನು ಪುರಸ್ಕರಿಸಿಕೊಂಡು ತನ್ನ ಅಹಂಕಾರವನ್ನು ಮೆರೆಯುತ್ತಾನೆ. ಪರಿತಾಪ ಹೆಚ್ಚಾಗಿ ತನ್ನಲೇ ತಾನು ನಂಬಿಕೆ, ವಿಶ್ವಾಸಗಳನ್ನು ಕಳೆದುಕೊಂಡು ಮನೋವ್ಯಾಕುಲತೆಗೆ ಒಳಗಾಗುತ್ತಾನೆ.

೧೬ ವರ್ಷಗಳ ನಂತರ ಬೊಹಿಮಿಯಾ ಮತ್ತು ಸಿಸಿಲಿಯಾ ನಾಡಿನಲ್ಲಿ ಅನಿರೀಕ್ಷಿತ ಬದಲಾವಣೆಗಳಾಗುತ್ತವೆ. ಪೆರ್ಡಿಟಾ ಕುರುಬರ ಹುಡುಗಿಯಾಗಿ ಬೆಳೆದು ಪಾಲಿಕ್ಸೆನಸ್ ರಾಜನ ಮಗನಾದ ಫ್ಲಾರಿಜಲ್ ನನ್ನು ಪ್ರೀತಿಸುತ್ತಾಳೆ. ಪೆರ್ಡಿಟಾಳ ಐಡೆಂಟಿಟಿಯ ಹುಡುಕಾಟ ನಡೆಯುತ್ತದೆ. ಸಾಕುತಂದೆಯಾದ ಮುದುಕ ಕುರಿಗಾಹಿಯು ಹುಡುಕಾಟದ ನೆಲೆಗೆ ಮುಕ್ತಿ ನೀಡುತ್ತಾನೆ. ಈ ಯುವರ ಪ್ರೇಮವನ್ನು ಪಾಲಿಕ್ಸೆನಸ್ ಅಂಗೀಕರಿಸದ ಕಾರಣ ಪ್ರೇಮಿಗಳಿಬ್ಬರು ಸಿಸಿಲಿಯಾ ರಾಜ್ಯದಲ್ಲಿ ರಾಜಾಶ್ರಯ ಪಡೆಯುತ್ತಾರೆ. ಹಾದರಗಿತ್ತಿಯೆಂಬ ಅಪಕೀರ್ತಿಗೆ ತನ್ನ ರಾಜನಿಂದ ಗುರಿಯಾದ ಹರ್ಮಿಯೋನ್ ತನ್ನ ಮಗನಾದ ಮ್ಯಾಮಿಲಿಯಸ್‌ನ ಅಕಾಲಮರಣ ಸುದ್ದಿ ಕೇಳಿ ಮರಣವನ್ನಪ್ಪಿದಳೆಂದು ರಾಜ ತಿಳಿಯುತ್ತಾನೆ. ಆದರೆ ರಾಣಿಯ ಸಖಿ ಪೌಲಿನಾ ತನ್ನ ಒಡತಿಯನ್ನು ಸುಮಾರು ೧೬ ವರ್ಷಗಳ ಕಾಲ ಅವಳು ಅಮಾನತ್ತಿನಲ್ಲಿರುವ ಕಾಲದಲ್ಲಿ ಗೌಪ್ಯವಾಗಿ ರಕ್ಷಣೆ ಮಾಡಿ ಆಕೆಯ ಮೂರ್ತಿಯನ್ನು (ರೋಮ್‌ನ ಸುಪ್ರಸಿದ್ಧ ಕಲಾವಿದ ರೋಮಾನೋ ಎಂಬ ಕಲಾವಿದನಿಂದ ಆಕೆಯನ್ನು ಜೀವಂತ ಗೊಂಬೆಯಂತೆ) ನಿರ್ಮಿಸುತ್ತಾಳೆ.

ಅಂತಿಮವಾಗಿ ನಿರಂತರವಾದ ಪಶ್ಚಾತಾಪದ ಬೇಗೆಯಲ್ಲಿ ನರಳಿದ ಲಿಯೋನ್ಟಸ್‌ಗೆ ತನ್ನ ತಪ್ಪಿನ ಅರಿವಾಗಿ ತನ್ನ ರಾಣಿ ಮತ್ತು ಗೆಳೆಯನನ್ನು ಭೇಟಿ ಮಾಡುವ ಸ್ಮರಣೆಯಲ್ಲಿರುತ್ತಾನೆ. ತನ್ನ ಬಾಲ್ಯದ ಗೆಳೆಯನನ್ನು ತನ್ನ ರಾಜ್ಯದಲ್ಲೇ ಸೇರುವುದರ ಜೊತೆಗೆ, ಕಳಂಕಿತಳೆಂಬ ಆರೋಪಕ್ಕೊಳಗಾದ ರಾಣಿಯನ್ನು ರಾಜನು ಭೇಟಿಯಾಗುವಂತೆ ಸಖಿ ಪೌಲಿನ ಸಹಕರಿಸುತ್ತಾಳೆ. ಅಗಲಿದ ಎಲ್ಲಾ ಸಂಬಂಧಗಳು ಮತ್ತೆ ಒಂದಾಗುವುದರ ಮೂಲಕ Winters Tale ನಾಟಕ ಕೊನೆಯಾಗುತ್ತದೆ.

ಪ್ರಸ್ತುತ ಲೇಖನವು ಮನುಷ್ಯನಲ್ಲಿ ಸ್ನೇಹ ಮತ್ತು ದ್ವೇಷವೆಂಬ ರಾಗಗಳು ಮತ್ತು ಅವುಗಳ ವೈರುಧ್ಯಗಳು ಮನುಷ್ಯನಲ್ಲಿ ಹೇಗೆ ಮತ್ತು ಯಾವ ಸೂಕ್ಷ್ಮ ಸನ್ನಿವೇಶದಲ್ಲಿ ಹುಟ್ಟುತ್ತವೆ. ಅಸೂಯೆ ಯೆಂಬ ಭಾವ–ರಾಗವು ಸಹಜವೋ, ಅಸಹಜವೋ? ಸಾಂಧರ್ಬಿಕ ಸಾಕ್ಷಿಗಳ ಪ್ರಭಾವ ಮತ್ತು ಪ್ರಚೋದನೆಗಳು ಈ ರಾಗ–ಭಾವಕ್ಕೆ ಹೇಗೆ ಕಾರಣವಾಗುತ್ತದೆ? ಆಕರ್ಷಣಾ ಮತ್ತು ವಿಕರ್ಷಣಾ ಗುಣ–ಸ್ವಭಾವಗಳು ರಾಜ ಲಿಯೋನ್ಟಸ್ ಎಂಬ ಪಾತ್ರದಲ್ಲಿ ಹೇಗೆ ಬಿಂಬಿತವಾಗಿವೆ ಎಂಬುದನ್ನು ಓದುಗರಿಗೆ ಅನುಸಂಧಾನ ಮಾಡುವ ಪ್ರಯತ್ನ ಮಾಡುತ್ತದೆ.

– ಶ್ರೀನಿವಾಸಪ್ಪ .ಜಿ.

ಆಂಗ್ಲ ವಿಭಾಗ, ಸರ್ಕಾರಿ ಪದವಿ ಕಾಲೇಜು

ಹುಳಿಯಾರು



## ಮೀಡಿಯ–ಕೆಲವು ಟಿಪ್ಪಣಿಗಳು

ಗ್ರೀಕ್ ರುದ್ರನಾಟಕತ್ರಯ ರೆಂದೇ ಹೆಸರಾದ ಈಸ್ಕೈಲಸ್, ಸಾಫೋಕ್ಲಿಸ್, ಯೂರಿಪಿಡೀಸ್ ಗ್ರೀಕ್ ರಂಗಭೂಮಿಗೆ ಉಜ್ವಲ ಕೊಡುಗೆ ನೀಡಿದವರು. ಥೆಸ್ಪಿಸ್‌ನಿಂದ ಹಿಡಿದು ಯೂರಿಪಿಡೀಸ್‌ನವರೆಗೆ ಗ್ರೀಕ್ ರುದ್ರ ನಾಟಕಗಳು ಒಂದೊಂದೇ ಹಂತ ಏರುತ್ತ ಯೂರಿಪಿಡೀಸ್‌ನ ಹೊತ್ತಿಗೆ ಆಧುನಿಕ ಎನ್ನಬಹುದಾದ ರೀತಿಯಲ್ಲಿ ರೂಪುಗೊಂಡವು. ಯೂರಿಪಿಡೀಸ್ (ಕ್ರಿ.ಪೂ.480–406) ತೊಂಭತ್ತೆರಡು ನಾಟಕಗಳನ್ನು ಬರೆದಿದ್ದಾನೆಂದು ಪ್ರತೀತಿ. ಆದರೆ ಅವನ ಹತ್ತೊಂಭತ್ತು ಕೃತಿಗಳು ಮಾತ್ರ ಉಳಿದಿವೆ. ಈತನು ತನ್ನ ನಾಟಕ ರಚನೆಯಲ್ಲಿ ವಸ್ತು, ಕ್ರಿಯೆ, ಪಾತ್ರಸೃಷ್ಟಿ ರಚನೆಯಲ್ಲಿ ಪೂರ್ವಸೂರಿಗಿಂತಲೂ ಭಿನ್ನನಾಗಿದ್ದಾನೆ. ಈತನ ದೃಷ್ಟಿ ಆಧುನಿಕವಾದುದು. ಗ್ರೀಕ್ ಪುರಾಣ ಕಥೆಗಳೇ ಈತನಿಗೆ ಮೂಲವಸ್ತುವಾದರೂ ಈತನು ರಚನೆಯಲ್ಲಿ ನಿರ್ವಹಿಸುವ ಸ್ವಾತಂತ್ರ್ಯ ಆ ಕಾಲಕ್ಕೆ ವಿನೂತನವಾದುದು. ದೇವತೆಗಳನ್ನು ಚಿತ್ರಿಸುವಾಗ, ಪಾತ್ರಗಳನ್ನು ಸೃಷ್ಟಿಸುವಾಗ ಹೊಸ ಆಶಯಗಳೊಂದಿಗೆ ಸೃಷ್ಟಿಸುವಲ್ಲಿ ಈತನ ಕಾಳಜಿ ವಿಶೇಷವಾದುದು. ಹಿಂದಿನ ಪರಂಪರೆಗೆ ಹೊಸ ಚಿಂತನೆಗಳನ್ನು ನೀಡುವ ಮೂಲಕ ನಾಟಕಗಳನ್ನು ವಿಶಿಷ್ಟ ವ್ಯಾಖ್ಯಾನಕ್ಕೆ ಗುರಿಪಡಿಸಿದ. ಯೂರಿಪಿಡೀಸನಲ್ಲಿ ಚಿತ್ರಣಗೊಂಡ ಸ್ತ್ರೀ, ಪುರುಷ ಪಾತ್ರಗಳು ಸಂಕೀರ್ಣಮಟ್ಟದವು ಎಂದು ಹೇಳಬಹುದು. ಸರಕು ಹಳೆಯದೇ ಆದರೂ ಮನೋಧರ್ಮ ಹೊಸದು. ಈ ದೃಷ್ಟಿಯಿಂದ ಹೊಸ ಮೌಲ್ಯಗಳ ಆವಿಷ್ಕಾರಕ್ಕೆ ಪ್ರಯತ್ನಿಸುವ ಕಾಳಜಿ ವಿಶೇಷ ಒಲವಿಗೆ ಕಾರಣವಾಗುತ್ತದೆ. ಆದರೆ ಇದೇ ಕಾರಣಕ್ಕೆ ಅಂದು ವಿರೋಧವನ್ನು ಎದುರಿಸಬೇಕಾಯಿತು. ಇವನನ್ನು 'ಆಧುನಿಕ ರಂಗಭೂಮಿಯ ಜನಕ' ಎಂದು ಕರೆಯುವುದರಲ್ಲಿ ಅರ್ಥವಿದೆ. ಈ ದೃಷ್ಟಿಯಿಂದ



"ಮೀಡಿಯ" ನಾಟಕದ ವಸ್ತು, ಸಂವಿಧಾನ, ಆಶಯದ ದೃಷ್ಟಿಯಲ್ಲಿ ಹೇಗೆ ಭಿನ್ನತೆಯನ್ನು ಸಾಧಿಸಿದ್ದಾನೆ ಎಂದು ವಿವೇಚಿಸುವುದು ಈ ಲೇಖನದ ಉದ್ದೇಶವಾಗಿದೆ. ಯೂರಿಪಿಡೀಸ್‌ನ ರುದ್ರ ನಾಟಕ ಗಳಲ್ಲಿ 'ಮೀಡಿಯ' ವಿಶಿಷ್ಟವಾದುದು. ಹೆಸರೇ ಹೇಳುವಂತೆ 'ಮೀಡಿಯ'ಳೇ ಇಲ್ಲಿನ ನಾಯಕಿ. ಹೆಣ್ಣಿನ ಸುತ್ತಲೂ ಹೆಣೆದ ಒಂದು ಪ್ರೇಮದ ಕತೆ. ಈ ಪ್ರೇಮದ ಕತೆ ದಾರುಣವಾದ ಕ್ರೌರ್ಯದ, ಹಿಂಸೆಯ ಕತೆಯೂ ಹೌದು. ಈ ನಾಟಕವನ್ನು ಓದಿದ ಮೇಲೆ ಮನಸ್ಸನ್ನಾವರಿಸಿ ಆಲೋಚನೆಗೆ ಗುರಿಮಾಡುತ್ತದೆ. ಯಾವ ಕಾರಣಕ್ಕೆ ಮನಸ್ಸಿನಲ್ಲಿ ನಿಲ್ಲುತ್ತದೆ ಎಂದು ಪ್ರಶ್ನಿಸಿಕೊಂಡರೆ ಗೊಂದಲ ಶುರುವಾಗುತ್ತದೆ. ಮೀಡಿಯಾಳ ಪಾತ್ರವೇ? ಜೇಸನ್ನನ ಪಾತ್ರವೇ? ಮಕ್ಕಳೇ? ಗ್ಲಾಸೆಯೇ? ಕ್ರೆಯಾನನೇ? ಇವೆಲ್ಲಕ್ಕೂ ಸರಳವಾಗಿ ಉತ್ತರಿಸಲು ಸಾಧ್ಯವೇ ಆಗುವುದಿಲ್ಲ. ಈ ಕಾರಣದಿಂದ 'ಮೀಡಿಯ' ವಿಶಿಷ್ಟ ನಾಟಕವೂ ಹೌದು.

'ಮೀಡಿಯ'ದ ವಸ್ತು ಗ್ರೀಕ್ ಪರಂಪರೆಯದೇ ಆದರೂ ಅದೊಂದು ಸಾಮಾಜಿಕ ನಾಟಕ. ಜೇಸನ್‌ನಿಗೆ ನ್ಯಾಯವಾಗಿ ದೊರೆಯಬೇಕಾಗಿದ್ದ ರಾಜ ಪದವಿ ಯನ್ನು ತಪ್ಪಿಸಿ ತಾನೇ ರಾಜನಾಗಿದ್ದನು ಪೇಲಿಯಾಸ್. ಜೇಸನ್‌ನನ್ನು ನಿರ್ನಾಮ ಮಾಡಲು ಕಪ್ಪು ಸಾಗರದ ಸಮೀಪವೇ ಕಾಲ್ಚಿಸ್‌ಗೆ ಹೋಗಿ ಹೊನ್ನ ತುಪ್ಪಳವನ್ನು ಗೆದ್ದು ತರಲು ಪಂಥ ಹೂಡುವನು. ಹೊನ್ನ ತುಪ್ಪಳಕ್ಕೆ ಕಾಯುತ್ತಿದ್ದ ಡ್ರೇಗನ್‌ಗಳಿಂದ ತಪ್ಪಿಸಿ ಹೊನ್ನ ತುಪ್ಪಳ ಜೇಸನ್‌ನಿಗೆ ಲಭ್ಯವಾಗುವಂತೆ ಅನುಕೂಲ ಮಾಡಿದವಳು ಮೀಡಿಯ. ಅವಳ ಈ ಸಾಹಸಕ್ಕೆ ಮಣಿದ ಜೇಸನ್ ವಿವಾಹವಾಗುವುದಾಗಿ ಆಕೆಗೆ ವಚನ ನೀಡಿ ತನ್ನೊಡನೆ ತನ್ನ ನಾಡಿಗೆ ಕರೆದು ತರುತ್ತಾನೆ. ಇದು ಮೂಲತಃ ಜೇಸನ್ ನಂತಹ ನಾಗರಿಕನಿಗೂ ಮತ್ತು ಮೀಡಿಯ ಎಂಬ ಅನಾಗರಿಕ ಹೆಣ್ಣಿಗೂ ಸಂಬಂಧ ಏರ್ಪಡುವ ಸಂದರ್ಭ.

ಪ್ರೇಮಕ್ಕಾಗಿ ತನ್ನ ನಾಡನ್ನು, ತನ್ನ ತವರನ್ನು ತೊರೆಯಲುಸಿದ್ಧಳಾಗುತ್ತಾಳೆ. ತನ್ನ ಸಹೋದರನನ್ನೇ ಕೊಂದು ಬರುತ್ತಾಳೆ. ಪ್ರೇಮಕ್ಕೆ ಮಾರುಹೋದ ಮೀಡಿಯ ತನ್ನ ನಾಡು, ತನ್ನ ಕುಟುಂಬ ತೊರೆದು ಪರ ರಾಷ್ಟ್ರದ ಪ್ರಜೆಯೊಂದಿಗೆ ಬರುವಾಗ ಉತ್ಕಟವಾದ ಬಯಕೆ ಇಲ್ಲದೆ ಬರಲಾರಳು. ಮುಂದೊಂದು ದಿನ ಜೇಸನ್‌ನಂತಹ ನಾಗರಿಕನಿಂದ ತೊಂದರೆಯಾದೀತು ಎಂದು ಕನಸಿನಲ್ಲಿಯೂ ಎಣಿಸದವಳು. ಪ್ರೀತಿಯ ಸಮುದ್ರದಲ್ಲಿ ತೇಲಿ ಬಂದವಳು. ಜೇಸನ್ನನ ಮರು ಮದುವೆ ಮೀಡಿಯಳ ಪ್ರೀತಿಯ ಹೃದಯಕ್ಕೆ ಎಂತಹ ಆಘಾತ ನೀಡಿರಬಹುದು. ತನ್ನ ನಲ್ಲನಿಗಾಗಿ ಸ್ವದೇಶ ತೊರೆದು ಬಂದವಳು. ಶಾಶ್ವತವಾಗಿ ತನ್ನ ತವರಿಗೆ ಹಿಂದಿರುಗುವ ಯಾವ ಹಕ್ಕೂ ಇಲ್ಲದವಳು. ದಿಕ್ಕು ತೋಚದವಳು. ಯಾರಿಗಾಗಿ ಎಲ್ಲವನ್ನೂ ಬಿಟ್ಟು ಬಂದಿದ್ದಳೋ ಅವರಿಂದಲೇ ತನ್ನ ಬದುಕು ಛಿದ್ರವಾಗುತ್ತದೆ. ಇದಲ್ಲದೆ ಕ್ರೇಯಾನ್‌ನಿಂದ ಗಡೀಪಾರು ರಾಜಾಜ್ಞೆ ಬೇರೆ. ಯಾವ ತಪ್ಪನ್ನೂ ಮಾಡದ ಮೀಡಿಯಳಿಗೆ ಇಂತಹ ದುಸ್ಥಿತಿ ಬಂದೊದಗಿದ್ದು ತೀರಾ ಆಘಾತಕರ. ನಿಂತ ನೆಲವೇ ಬಿರುಕುಬಿಟ್ಟಂತಹ ಅನುಭವ. ಭಾವಾವೇಶಕ್ಕೆ ಒಳಗಾಗಿ ಏನೇನೋ ಯೋಚಿಸುತ್ತಾಳೆ. ಭಾವಾವೇಶ ಎಂತಹ ಅನರ್ಥಕ್ಕೆ ದಾರಿಮಾಡಿಕೊಡುತ್ತದೆ ಎಂಬುದು ಮೀಡಿಯಳ ಕ್ರೌರ್ಯ ಸಾಬೀತುಮಾಡುತ್ತದೆ.

"ದೇಶ ಭ್ರಷ್ಟಳಾಗಿ ಬಂದ ಆಕೆ ಇಲ್ಲಿನ ಪ್ರಜೆಗಳ ಆದರಾತಿಥ್ಯವನ್ನು ಗಳಿಸಿದಳು ಜೇಸನ್‌ನಿಗೆ ಸಂಪೂರ್ಣ ವಿಧೇಯಳಾಗಿದ್ದಳು" (ಪುಟ 85) ದಾದಿ ಹೇಳುವ ಈ ಮಾತುಗಳಿಂದ ಜೇಸನ್ ಮತ್ತು ಮೀಡಿಯಳ ಜೀವನ ಸುಖಕರವಾಗಿದ್ದ ಬಗ್ಗೆ, ಅವಳು ಪ್ರಜೆಗಳ ಆದ ಗಳಿಸಿದ್ದಳು ಎಂಬುದು ತಿಳಿಯುತ್ತದೆ. ಮುಂದುವರಿದು ಇದೇ ದಾದಿ "ಎಲ್ಲಿ ತೀವ್ರವಾದ ಪ್ರೀತಿಯಿತ್ತೋ ಅಲ್ಲೇ ಸಂಕಟವಿದೆ" ಎಂದೂ ಕೂಡ ಹೇಳುತ್ತಾಳೆ. ಈ ವಾಕ್ಯವು ಇಡೀ ನಾಟಕದ ಆಶಯವನ್ನು ಧ್ವನಿಸುತ್ತದೆ. ತೀವ್ರವಾದ ಪ್ರೀತಿ ದ್ವೇಷವಾಗಿ ಮಾರ್ಪಡಲು ಜೇಸನ್‌ನೇ ಕಾರಣನಾಗಿದ್ದಾನೆ. ಅವಳ ಹಗೆತನ ಅನಾಗರಿಕತೆ ಕೂಡ ನಾಗರಿಕ ಸಂಸ್ಕಾರದಲ್ಲಿ ಮಾನ್ಯತೆ ಪಡೆಯುವಂತಹ ಸಾಧನೆಯಾಗಿದ್ದು ಪರಿಸರದಿಂದ. ಅವಳ ಪ್ರೀತಿಯ ತೀವ್ರತೆಯಿಂದಲೇ ನಾಗರಿಕ ಪ್ರಪಂಚ ತೆರೆದುಕೊಂಡಿದ್ದು. ಯೂರಿಪಿಡೀಸ್‌ನ ಇನ್ನೊಂದು ಆಶಯ ಇಲ್ಲಿ ಕಾಣುವಂತೆ ತೋರುತ್ತದೆ. ನಾಗರಿಕ ಮಾತ್ರ ನಾಗರಿಕನಲ್ಲ. ಅನಾಗರಿಕನೂ ಅಷ್ಟೆ. ಅವನು ಯಾವ ಕಾಲಕ್ಕೂ ಅನಾಗರಿಕನಲ್ಲ. ಇವೆರಡೂ ಬೇರೆಯಾಗಬಹುದು. ಅದಕ್ಕೆ ಪರಿಸರ, ಅರ್ಥ ಮಾಡಿಕೊಳ್ಳುವ ಮನಸ್ಸು ಮುಖ್ಯ ಎಂಬುದನ್ನು ಹೇಳಲು ನಾಟಕಕಾರ ಪ್ರಯತ್ನಿಸಿದಂತಿದೆ. ನಾಗರಿಕ ಜೇಸನ್ ನಾಗರಿಕನೇ? ಎಂದೂ ಕೂಡ ಪ್ರಶ್ನೆ ಮಾಡಬಹುದು. ಮೀಡಿಯ ಅನಾಗರಿಕಳೇ ಆದರೂ ಅವಳ ಪ್ರೀತಿ ಎಲ್ಲೆ ಮೀರಿದ್ದು. ಮೂಲತ: ಮಾಟಗಾತಿ. ಅವಳಿಗೆ ನಾಗರಿಕ ಪ್ರಪಂಚದ ಪ್ರೀತಿ ತೆರೆದುಕೊಳ್ಳುವುದು ಅಸಾಧ್ಯವಾಗಿತ್ತು. ಜೇಸನ್‌ನಿಂದ ಹೊಸ ಪ್ರಪಂಚಕ್ಕೆ ಕಾಲಿಟ್ಟಾಗ ತುಂಬ ಹೆಮ್ಮೆ ಪಟ್ಟವಳು. ಆದರೆ ಸಂತೋಷದ ಹಿಂದೆಯೇ ನೋವು ಬಾಯಿ ತೆರೆದು ತನ್ನ ಪ್ರೀತಿಯನ್ನು ಕಬಳಿಸಿ ಬಿಡುತ್ತದೆ ಎಂದು ಅವಳು ಊಹಿಸಿರಲಿಲ್ಲ. ಅನಾಗರಿಕ ಪ್ರಪಂಚದ ಹೆಣ್ಣಿನಲ್ಲೂ ಪ್ರೀತಿಗಾಗಿ ನಡೆಯುವ ಅವಳ ಮನೋಬಲ ತೀರಾ ಗಟ್ಟಿ, ಏಕೆಂದರೆ ಸೋದರರನ್ನು ಹಿಂಸೆಯಿಂದ ಕೊಂದ ಕತೆ(ತುಂಡು ತುಂಡು ಮಾಡಿ) ಇದಕ್ಕೆ ನಿದರ್ಶನವಾಗಬಲ್ಲದು. ತನ್ನ ಪ್ರೀತಿಗೆ ಧಕ್ಕೆ ಬಂದರೆ ಸಹಿಸಲಾರಳು ಎಂಬುದನ್ನು ಇದು ಸಾಬೀತು ಮಾಡುತ್ತದೆ. ಆದರೆ ಈ ಗಟ್ಟಿ ವ್ಯಕ್ತಿತ್ವಕ್ಕೆ ಧಕ್ಕೆ ಒದಗಿದರೆ ಏನಾಗಬೇಡ? ಅದು ತೀರ ಅನಿರೀಕ್ಷಿತ ಕೂಡ. ತೀರ ವಿಚಿತ್ರವಾಗಿ ಯೋಚಿಸುವಂತಾಯಿತು. ತನ್ನ ಪ್ರೀತಿಗೆ ದ್ರೋಹವನ್ನೆಸಗಿದ ಜೇಸನ್ನನನ್ನು ಕೊಲ್ಲುವುದಿಲ್ಲ; ಬದಲಾಗಿ ಅವನು ಜೀವಂತ ವಾಗಿದ್ದು, ಅವನ ಹೃದಯ ಚಿತ್ರಹಿಂಸೆ ಅನುಭವಿಸಬೇಕು ಎಂಬ ಏಕಮಾತ್ರ ಉದ್ದೇಶವೊಂದೇ ಅವಳ ದೃಷ್ಟಿಯಲ್ಲಿದ್ದದ್ದು. ಇಲ್ಲಿ ಪ್ರೀತಿ ದ್ವೇಷವಾಗಿ ಮಾರ್ಪಟ್ಟಿದೆ. ಇದಕ್ಕೆ ತನ್ನ ಮಕ್ಕಳನ್ನೇ ಅಸ್ತ್ರಗಳಾಗಿ ಉಪಯೋಗಿಸುತ್ತಾಳೆ. ಇದು ತೀರಾ ಅಮಾನವೀಯವಾದುದು. 'ಜಗತ್ತಿನಲ್ಲಿ ಕೆಟ್ಟ ತಂದೆ ಇರಬಹುದು, ತಾಯಿ ಇರಲಾರಳು' ಎಂಬ ಸಂಗತಿಯನ್ನು ಸುಳ್ಳು ಮಾಡುತ್ತದೆ. ಈ ಸಂಗತಿ ಬರೀ ಈ ನಾಟಕಕ್ಕೆ ಅನ್ವಯಿಸಿಕೊಳ್ಳುವಂತಿಲ್ಲ. ನಮ್ಮ ಸಮಕಾಲೀನ ಸಮಾಜದ ಸಂದರ್ಭದಲ್ಲಿ ಪ್ರೀತಿಸಿ ಗಂಡ ತೊರೆದಾಗ ಎಷ್ಟೋ ಹೆಣ್ಣುಗಳು ತಮ್ಮ ಮಕ್ಕಳ ಸಮೇತ ಆತ್ಮಹತ್ಯೆ ಮಾಡಿಕೊಂಡ ಸಂಗತಿಗಳು, ಗಂಡನನ್ನೇ ಕೊಲೆ ಮಾಡಿ ತಾನೂ ಸತ್ತ ಘಟನೆಗಳು ನಮ್ಮೆದುರಿಗೇ ಇವೆ. ಈ ಸಂಗತಿಗಳನ್ನು ಕೂಡ ದೃಷ್ಟಿಯಲ್ಲಿ ಇರಿಸಿಕೊಳ್ಳಬೇಕಾಗುತ್ತದೆ. ಈ ಕಾರಣದಿಂದಲೇ ಕ್ರಿ.ಪೂ.ದಲ್ಲಿ ರಚನೆಗೊಂಡ ನಾಟಕವಾದರೂ ಸಮಕಾಲೀನ ಸಂದರ್ಭಕ್ಕೆ ಹೇಗೆ ಉತ್ತರ ನೀಡಲು ಶಕ್ತವಾಗುತ್ತದೆ ಎಂಬುದನ್ನೂ ಗಮನಿಸಬೇಕಾಗುತ್ತದೆ. "ನಿಷ್ಕರುಣೆಯಿಂದ ಕೊಲ್ಲುವ ಬೇರೊಬ್ಬರಿಗೆ ಅವರನ್ನು ಒಪ್ಪಿಸುವಂತಿಲ್ಲ. ಹೇಗಿದ್ದರೂ ಅವರ ಸಾವು ನಿಶ್ಚಿತ. ಅವರು ಸಾಯುವುದೇ ಆದರೆ ಜನ್ಮ ಕೊಟ್ಟ ನಾನೇ ಅವರನ್ನು ಕೊಲ್ಲುತ್ತೇನೆ".

ಪುಟ 147) ಎನ್ನುತ್ತಾಳೆ. ಕೊಲ್ಲುವಾಗ ಮೀಡಿಯಳಿಗೆ ದು:ಖವಿಲ್ಲ, ಮಮತೆಯಿಲ್ಲವೆಂದಲ್ಲ ಆದರೆ ಪ್ರೇಮದ ಉನ್ಮಾದದಲ್ಲಿ ಅವಳು ಎಲ್ಲವನ್ನೂ ತಿರಸ್ಕರಿಸಿ ನಲ್ಲನ ನಾಶವನ್ನೇ ಮುಖ್ಯ ಗುರಿಯನ್ನಾಗಿರಿಸಿಕೊಳ್ಳುತ್ತಾಳೆ. "ನಿನ್ನ ಮಕ್ಕಳನ್ನು ಮರೆತು ಬಿಡು ಬಳಿಕ ಅಳು, ನೀನವರನ್ನು ಕೊಲ್ಲುವೆಯಾದರೂ ಅವರು ನಿನ್ನ ಮಮತೆಯ ಮಕ್ಕಳು, ಅಯ್ಯೋ ನನ್ನ ಬದುಕು ಎಷ್ಟು ಕಠೋರವಾಗಿದೆ"(ಪುಟ 148) ಎಂದು ತನ್ನ ಬದುಕನ್ನು ನೆನದು ದು:ಖಿಸುತ್ತಾಳೆ. "ಹೆಣ್ಣಾಗಿ ಹುಟ್ಟಿದ ನಾವು ಪ್ರಾಮಾಣಿಕ ಉದ್ದೇಶಕ್ಕೆ ಅಪ್ರಯೋಜಕರು" ಎಂದು ತನ್ನ ಪ್ರೀತಿಯ ಪ್ರಾಮಾಣಿಕತೆಯನ್ನು ನೆನದು ದು:ಖಿಸುತ್ತಾಳೆ. ತನ್ನ ಅತಿಯಾದ ಸ್ವಾಭಿಮಾನ ಕೂಡ ತನ್ನ ಪ್ರತಿಷ್ಠೆಗೆ, ಛಲಕ್ಕೆ ಉದ್ದೇಶಕ್ಕೆ ಅನುವಾಗುತ್ತದೆ. "ಕೀರ್ತಿವಂತ ರಾಜನ ಮಗಳು ನೀನು, ನಿನ್ನಜ್ಜ ಸೂರ್ಯದೇವ, ಜೇಸನ್ ಮತ್ತವರ ಸಂಗಡಿಗರಿಂದ ನಗೇಡಾಗುವೆಯಾ?"(ಪುಟ 106) ಎಂಬ ಸ್ವಾಭಿಮಾನ ಬೇರೆ ಕೆಣಕುತ್ತದೆ. "ಓ ನನ್ನ ತಂದೆಯೇ ತಾಯ್ನಾಡೇ ನಿಮ್ಮನ್ನು ಪರಿತ್ಯಜಿಸಿ ಒಡಹುಟ್ಟಿದ ಸೋದರರನ್ನೇ ಕೊಂದು, ನಾನೆಂಥ ಅಪಮಾನ ಮಾಡಿದೆ?"(ಪುಟ 94) ಎಂದು ಎಲ್ಲವನ್ನೂ ಕಡು ದು:ಖದಿಂದ ನೆನೆಯುತ್ತಾಳೆ. ಅತ್ತೂ ಅತ್ತೂ ತನ್ನ ದೈವಕ್ಕೆ ಪ್ರಾರ್ಥನೆ ಮಾಡುತ್ತಾಳೆ. ದೈವಕ್ಕೆ ಅಗಾಧ ಶಕ್ತಿಯಿದೆಯೆನ್ನುತ್ತಾರೆ, ದೈವವೇ ನೀನೇಕೆ ಅನ್ಯಾಯ ಮಾಡಿದೆ" ಎಂದು ಕೂಡ ಪ್ರಶ್ನಿಸುತ್ತಾಳೆ.(ಪುಟ 193) ಮೀಡಿಯಳ ದು:ಖವನ್ನು ನೋಡಿ ದಾದಿ "ಹಿಂದಿನ ಕಾಲದ ಮನುಷ್ಯರಿಗೆ ಸ್ವಲ್ಪವೂ ಬುದ್ಧಿಯಿರಲಿಲ್ಲ. ಆದರೆ ಜೀವನದ ನೋವಿನ ಕಡು ದುಮ್ಮಾನಗಳನ್ನು ಹೋಗಲಾಡಿಸುವ ಸಲುವಾಗಿ ಗೀತೆಗಳನ್ನು ಕೃತಿಮಾಡಿದ ವಾದ್ಯಗಳನ್ನು ಬಳಸಿಕೊಳ್ಳುವುದನ್ನು ಯಾರೊಬ್ಬರೂ ಯೋಚಿಸಲಿಲ್ಲ. ಸಾವಿನ ಅನರ್ಥಗಳಿಗೆ ಕುಟುಂಬಗಳು ನಾಶವಾಗುವುದಕ್ಕೆ ತೀವ್ರವಾದ ದು:ಖವೇ ನಿಜವಾದ ಕಾರಣವೆನ್ನಬೇಕು.....". "ಹೊಟ್ಟೆ ಬಿರಿಯುವಂತೆ ತಿಂದ ಜನ ಈಗಾಗಲೇ ಸಂತೋಷದಿಂದಿರುವಾಗ ಸೊಗಸಾದ ಊಟವಾದ ಮೇಲೆ ಸಂಗೀತದ ಅಗತ್ಯವಾದರೂ ಏನಿದೆ?"(ಪುಟ95) ಎನ್ನುತ್ತಾಳೆ. ಕವಿ ದಾದಿಯ ಮೂಲಕ ತನ್ನ ಅನಿಸಿಕೆಯನ್ನು ವ್ಯಕ್ತಪಡಿಸಿದ್ದಾನೆ. ಮೀಡಿಯ ಎಂಬ ಹೆಣ್ಣು ರಕ್ಕಸಿಯಾಗಲು ಕಾರಣಗಳೇನು? ಎಂಬುದಕ್ಕೆ ಮೇಲಿನ ಸಾಲುಗಳೇ ನಿದರ್ಶನವಾಗುತ್ತವೆ. ಹಿಂಸೆಗೆ ಕಾರಣಗಳೇನು? ಮೀಡಿಯ ರಕ್ಕಸಿ ಏಕಾದಳು? ಎಂದು ಯಾರೂ ಪ್ರಶ್ನಿಸಬಹುದು? ಅದಕ್ಕಾಗಿ ತನ್ನ ಕೃತಿಯಲ್ಲೇ ನಾಟಕಕಾರ ಉತ್ತರಿಸಿದ್ದಾನೆ. "ಸಾವಿನ ಅನರ್ಥಗಳಿಗೆ, ಕುಟುಂಬಗಳು ನಾಶವಾಗುವುದಕ್ಕೆ ತೀವ್ರವಾದ ದು:ಖವೇ ಕಾರಣವೆನ್ನಬೇಕು"(ಪುಟ95) ಎಂದು ಕೃತಿಯಲ್ಲೇ ನಾಟಕಕಾರ ಹೇಳಿದ್ದಾನೆ. ಈ ಸಂದರ್ಭದಲ್ಲಿ ಟಿ.ಎಸ್ ಎಲಿಯಟ್ ಹೇಳಿದ "ನಿಜವಾದ ವಿಮರ್ಶೆ ಆ ಕೃತಿಯೊಳಗೇ ಇರುತ್ತದೆ" ಎಂಬ ಮಾತುಗಳು ನೆನಪಾಗುತ್ತವೆ.

ಮೀಡಿಯ ಮೂಲತ: ಅನಾಗರಿಕಳಾದರೂ ಅವಳು ಜೇಸನ್‌ನನ್ನು ಎಷ್ಟು ಪ್ರೀತಿಸುತ್ತಿದ್ದಳೆಂದರೆ "ನನ್ನ ಮೇಲೆರಗಿದ ಈ ಆಘಾತ ಅನಿರೀಕ್ಷಿತವಾದುದು. ಇದರಿಂದ ನನ್ನ ಹೃದಯ ಜರ್ಝರಿತವಾಗಿದೆ. ಬದುಕಿನಲ್ಲಿ ನನಗಿಂದು ಯಾವ ಸಂತೋಷವೂ ಉಳಿದಿಲ್ಲ. ಇಂದು ನನಗೆ ಬೇಕಾಗಿರುವುದು ಸಾವು! ನನ್ನ ಇಡೀ ಬದುಕು ಜೇಸನ್‌ನದಾಗಿತ್ತು."(ಪುಟ97) "ದುಬಾರಿ ಬೆಲೆ ತೆತ್ತೂ ಒಬ್ಬ ಗಂಡನನ್ನು ಕೊಂಡ ಮೇಲೂ ನಾವು ಅವನಿಗೆ ಸಂಪೂರ್ಣ ಅಧೀನವಾಗಿರಬೇಕು". (ಪುಟ97) ಇಲ್ಲಿ ತನ್ನ ಅಗಾಧ ಪ್ರೀತಿಯನ್ನು ತೋಡಿಕೊಳ್ಳುವ ಪರಿ ಯಾರನ್ನೂ ನೋಯಿಸುವಂಥದ್ದು. ಇಲ್ಲಿ ನಾಟಕಕಾರ 'ಕೊಂಡ' ಎನ್ನುವ ಶಬ್ದವನ್ನು ಬಳಸಿದ್ದಾನೆ. ಕುಟುಂಬ ವ್ಯಾಖ್ಯಾನಕ್ಕಿಂತ ವ್ಯಾವಹಾರಿಕ ದೃಷ್ಟಿಕೋನವನ್ನು ವಿಡಂಬಿಸಲು ಉದ್ದೇಶಪೂರ್ವಕವಾಗಿ ನಾಟಕಕಾರ ಈ ಶಬ್ದವನ್ನು ಪ್ರಜ್ಞಾಪೂರ್ವಕವಾಗಿ ಬಳಸಿದ್ದಾನೆ. ಇಲ್ಲಿ ದುಬಾರಿ ಬೆಲೆ ಅಂದರೆ ಸಹೋದರನ ಸಾವು, ತಾಯ್ನಾಡಿನಿಂದ ದೂರವಾಗಿರುವುದು. ತವರನ್ನು ಬಿಟ್ಟ ಹೆಣ್ಣು ಗಂಡನ ಮನೆಗಾಗಿ ಪ್ರಾಣ ನೀಡಲೂ ಸಿದ್ಧಳಾಗುತ್ತಾಳೆ. ಆದರೆ ಇಲ್ಲಿ ನಡೆಯುವ ಕುತಂತ್ರವೇ ಬೇರೆ. ಗಂಡನ ಮನೆ ಬಿಟ್ಟು ಬಂದ ಹೆಣ್ಣಿನ ತಲ್ಲಣ ಎಂಥದ್ದು ಎಂಬುದನ್ನು ಪುರುಷನಾಗಿಯೂ ಅತ್ಯಂತ ಬೌದ್ಧಿಕ ಪಾತಳಿಯಲ್ಲಿ ಅನಾವರಣಗೊಳಿಸಿರುವುದು ಅವನ ಸ್ತ್ರೀವಾದಿ ನಿಲುವಿಗೆ ನಿದರ್ಶನವಾಗಿದೆ. ಪುರುಷ ಪ್ರಧಾನ ಸಮಾಜದ ರಾಜ ಪರಂಪರೆಯಲ್ಲಿ ಎಂತಹ ಅನರ್ಥಗಳು ಸಂಭವಿಸುತ್ತವೆ ಎಂಬುದನ್ನು ಕೂಡ ನಾಟಕಕಾರ ಹೇಳಿರುವುದು ಆತನ ಸ್ಪಷ್ಟವಾದ ಆಲೋಚನೆಯನ್ನು ಮನದಟ್ಟು ಮಾಡಿ ಕೊಡುತ್ತದೆ. ಯೂರಿಪಿಡೀಸ್ ಹೆಣ್ಣಿನ ನೋವು, ಅವುಗಳಿಗಿರುವ ಕಾರಣಗಳನ್ನು ತುಂಬ ಸಮರ್ಥವಾಗಿ ಹಿಡಿದಿಡಬಲ್ಲವನಾಗಿದ್ದಾನೆ. ಹಾಗೆ ನೋಡಿದರೆ ಸ್ತ್ರೀವಾದಿ ನೆಲೆಯ ಪ್ರಧಾನ ಕೃತಿಯಾಗಿ 'ಮೀಡಿಯ'ನಾಟಕವನ್ನು ಗಮನಿಸಬೇಕಾಗುತ್ತದೆ. "ಗಂಡಸಿಗೆ ಮನೆಯ ಸಂಗಾತಿ ಬೇಸರವೆನಿಸಿದರೆ ಹೊರಗೆ ಹೋಗಿ ಬೇಸರ ನೀಗಿಸಿಕೊಳ್ಳಲು ಅವಕಾಶವಿದೆ. ಹೆಂಡಿರಾದ

ನಮಗಾದರೋ ಮನೆಯ ಗಂಡನೊಬ್ಬನೇ ಗತಿ ಇದಕ್ಕೆ ಗಂಡಸು ಹೇಳುವುದಾದರೂ ಏನು?"(ಪುಟ97) ಎಂದು ಮೀಡಿಯ ಪ್ರಶ್ನಿಸುತ್ತಿದ್ದಾಳೆ. ಪುರುಷ ಪ್ರಧಾನ ಸಮಾಜದ ಆಕ್ರಮಣ ಹೆಣ್ಣನ್ನು ಹೇಗೆ ಶೋಷಣೆಗೆ ಗುರಿ ಮಾಡಿದೆ ಎಂಬುದನ್ನು ಈ ಮಾತುಗಳಿಂದ ಗ್ರಹಿಸಬಹುದು. ಈ ಆಕ್ರಮಣವನ್ನು ಎದುರಿಸುವ ನೈತಿಕ ಶಕ್ತಿಯನ್ನು ಹೆಣ್ಣಿಗೆ ತುಂಬಬೇಕೆಂಬ ಇಚ್ಛೆಯೂ ನಾಟಕಕಾರನಿಗಿದೆ. "ಹೆಣ್ಣು ಅಬಲೆಯಲ್ಲ, ಸಬಲೆ. ಅವಳು ಮನಸ್ಸು ಮಾಡಿದರೆ ಯಾವುದೂ ಅಸಾಧ್ಯವಿಲ್ಲ" ಎಂಬುದನ್ನೂ ಕೂಡ ಈ ನಾಟಕದ ಆಶಯ ಧ್ವನಿಸುತ್ತದೆ. ಜೊತೆಗೆ ಆ ಕಾಲದಲ್ಲಿ ಹೀಗೆ ಸ್ತ್ರೀಪರ ಧ್ವನಿಯನ್ನು ಎತ್ತಿದರೆ ಪುರುಷ ಪ್ರಧಾನ ಸಮುದಾಯ ತನ್ನನ್ನು ಪ್ರಶ್ನಿಸಬಹುದು ಎಂಬ ಗುಮಾನಿಯೂ ನಾಟಕಕಾರನಿಗೆ ಕಾಡಿದಂತಿದೆ. ಮೀಡಿಯಳಿಯಲಿಗೆ ಒದಗಿದ ದುಸ್ಥಿತಿಯೇ ಆಕೆಯನ್ನು ರಕ್ಕಸಿಯನ್ನಾಗಿ ಮಾಡಿದೆ ಎಂಬುದನ್ನು ಅನೇಕ ಸಂದರ್ಭಗಳಲ್ಲಿ ಪದೇ ಪದೇ ಹೇಳುತ್ತಿರುವುದು ನೋಡಿದರೆ ಈ ಮಾತು ನಿಜವೆನ್ನಿಸುತ್ತದೆ. ನಾಟಕದಲ್ಲಿರುವ ಅನೇಕ ಮಾತುಗಳು ಇದಕ್ಕೆ ಉತ್ತರ ನೀಡುತ್ತವೆ. "ಜೇಸನ್‌ನು ಮಾಡಿದ ಅನ್ಯಾಯಕ್ಕೆ ಪ್ರತೀಕಾರವಾಗಿ ನಾನು ಯಾವುದಾದರೂ ದಾರಿ ಹಿಡಿದರೆ ನೀವು ಮಾತ್ರ ಉಸಿರೆತ್ತಬಾರದು. ಹೆಣ್ಣು ಬಹುಪಾಲು ವಿಚಾರಗಳಲ್ಲಿ ದುರ್ಬಲೆ ಮತ್ತು ಅಂಜುಬುರುಕಿ. ಆದರೆ ದಾಂಪತ್ಯಕ್ಕೆ ಸಂಬಂಧಿಸಿದ ಹಕ್ಕಿಗೆ ಚ್ಯುತಿ ಬಂದರೆ ಮಾತ್ರ ಅವಳ ಮನಸ್ಸು ಎಂತಹ ಕ್ರೌರ್ಯಕ್ಕೆ ಸಿದ್ಧವಾದೀತು?"(ಪುಟ98) ಎಂದು ಹೇಳಿಸಿರುವ ಮಾತುಗಳನ್ನು ಕುಟುಂಬ ಕಲಹಗಳಲ್ಲಿ ಪ್ರೀತಿಗೆ ಧಕ್ಕೆ ಬಂದಾಗ ಎಂತಹ ತ್ಯಾಗಕ್ಕೂ ಹೆಣ್ಣು ಸಿದ್ಧಳಾಗುತ್ತಾಳೆ ಎಂಬುದನ್ನು ವಸ್ತುನಿಷ್ಠವಾಗಿ ಹೇಳಲು ಪ್ರಯತ್ನಿಸಿರುವುದು ತಿಳಿಯುತ್ತದೆ. ತನ್ನ ನತದೃಷ್ಟತೆಯನ್ನು ನೆನದು "ಅಯ್ಯೋ ಅಯ್ಯೋ! ಎಂತಹ ದುರವಸ್ಥೆ, ಎಂತಹ ಹತಭಾಗ್ಯೆ! ನಾನೇನು ಮಾಡಲಿ? ನಾನು, ನಾನು ಸತ್ತಾದರೂ ಹೋಗಿದ್ದರೆ!" ಎಂದು ವಿಪರೀತ ದು:ಖಿಸುತ್ತಾಳೆ. ದಾದಿಯು "ಅನ್ನಾಹಾರವನ್ನು ಬಿಟ್ಟು ದು:ಖದ ಭಾರದಲ್ಲಿ ಕುಸಿದು ಬಿದ್ದಿರುವ ಆಕೆಯ ದಿನವೆಲ್ಲಾ ಕಣ್ಣೀರಿನಲ್ಲಿ ಕರಗಿ ಹೋಗುತ್ತಿದೆ" ಎಂದು ಮೀಡಿಯಳ ಅವಸ್ಥೆಯನ್ನು ವಿವರಿಸುತ್ತಾಳೆ. ಕಾರಿಂಥಿನ ರಾಜ ಕ್ರೇಯಾನ್ ಮಕ್ಕಳೊಡನೆ ಗಡೀಪಾರಾಗಬೇಕು ಎಂದು ತಿಳಿಸಿದಾಗ "ಸರ್ವನಾಶವಾಗುತ್ತಿರುವ ಈ ಹೊತ್ತಿನಲ್ಲಿ ನನಗೆ ಆಶ್ರಯವೇ ಕಾಣುತ್ತಿಲ್ಲ"(ಪುಟ99), "ಅಯ್ಯೋ ಪ್ರೀತಿಯೆಂಬುದು ಮನುಷ್ಯರ ಬದುಕಿನ ಮೇಲೆ ಎಷ್ಟು ಕಠೋರವಾಗಿದೆ' ಎಂದು ಕ್ರೇಯಾನ್‌ನ ಮಾತುಗಳಿಗೆ ಪ್ರಶ್ನಿಸಿಕೊಳ್ಳುತ್ತಾಳೆ. ಕ್ರೇಯಾನ್ ತನ್ನ ಮಗಳ ಪ್ರೀತಿಗಾಗಿ ಇವಳನ್ನು ಗಡೀಪಾರು ಮಾಡುವುದರಿಂದ ಅವರವರಿಗೆ ಅವರವರದೇ ಪ್ರೀತಿ. ಪ್ರೀತಿ ಎಂಥ ದಯನೀಯ ಸ್ಥಿತಿಯನ್ನು ನಿರ್ಮಾಣಮಾಡುತ್ತದೆ ಎಂಬುದನ್ನು ನಾಟಕಕಾರ ತುಂಬ ಅರ್ಥವತ್ತಾಗಿ ಹೇಳಿದ್ದಾನೆ. ಇಲ್ಲಿ ಸಂಭವಿಸುವ ಕ್ರಿಯೆ ಜೇಸನ್‌ನಿಗೆ ಸಂಬಂಧಿಸಿದ್ದು. ಇದು ರುದ್ರ ನಾಟಕದ ಒಂದು ಲಕ್ಷಣ. ಇಲ್ಲಿ ನಾಯಕ , ನಾಯಕಿ ಈರ್ವರೂ ಸಾಯುವುದಿಲ್ಲ. ರುದ್ರ ನಾಟಕ ನಾಯಕನ ಅತಿ ದಾರುಣವಾದ ವಿಪತ್ತು, ದು:ಖ, ಸಂತಾಪಗಳನ್ನು ವರ್ಣನೆ ಮಾಡಿ ಮರಣದಲ್ಲಿ ಮುಕ್ತಾಯವಾಗುವುದನ್ನು ಹೇಳುತ್ತದೆ. ಈ ಮಾತಂತೂ ಈ ನಾಟಕಕ್ಕೆ ಹೆಚ್ಚು ಒಪ್ಪುತ್ತದೆ.

ಜೇಸನ್‌ನಿಗೆ ರಾಜಲೋಭದ ಆಶೆ ಮೂಲತ: ರಕ್ತಗತವಾಗಿದ್ದು ರಾಜನ ಮಗಳು ಗ್ಲಾಸೆಯನ್ನು ಮದುವೆಯಾಗುವುದರ ಮೂಲಕ ರಾಜವೈಭವವನ್ನು ಮರಳಿ ಪಡೆಯಲು ಪ್ರಯತ್ನಿಸುತ್ತಾನೆ. ಅನಾಗರಿಕ ಸಮುದಾಯದ ಹೆಣ್ಣಿನ ಜೊತೆ ಮದುವೆಯಾದದ್ದು ಜೇಸನ್‌ಗೆ ತೃಪ್ತಿ ನೀಡಿರಲಿಲ್ಲ ಎಂಬುದನ್ನೂ ಕೂಡ ನಾಟಕ ಹೇಳುತ್ತದೆ. ಅನಾಗರಿಕ ಹೆಣ್ಣನ್ನು ವಿವಾಹವಾದುದಕ್ಕೆ ಅಂದಿನ ಸಮಾಜ ಟೀಕೆ ಮಾಡಿರಲೂಬಹುದು. ರಾಜವೈಭವದ ಸಹಜ ಗುಣಗಳು ಗ್ಲಾಸೆಯನ್ನು ವಿವಾಹವಾಗುವ ಘಟ್ಟಕ್ಕೆ ಬಲಿತು ಬಿಡುತ್ತವೆ. ಒಂದು ವೇಳೆ ಗ್ಲಾಸೆಯನ್ನು ವಿವಾಹವಾಗುವ ಸಂಗತಿಯನ್ನು ಹೇಳಿದ್ದರೆ ಅದನ್ನು ಒಪ್ಪುವ ಮಟ್ಟದಲ್ಲಿ ಮೀಡಿಯ ಇದ್ದಳೆ ಎಂಬ ಪ್ರಶ್ನೆ ಎದುರಾದರೆ ಅದನ್ನು ಅಷ್ಟು ಸುಲಭವಾಗಿ ಸ್ವೀಕರಿಸುವ ಗುಣ ಮೀಡಿಯಳಿಗೆ ಇಲ್ಲ ಎಂಬುದು ಯಾರಿಗೂ ತಿಳಿಯುತ್ತದೆ. ಪ್ರೀತಿಗಾಗಿ ಅಣ್ಣನನ್ನು ಕೊಂದು, ತನ್ನ ತಾಯ್ನಾಡನ್ನು ತೊರೆದು ಬಂದವಳು ಖಂಡಿತಾ ಒಪ್ಪುತ್ತಿರಲಿಲ್ಲ. ಅವಳ ಪ್ರೀತಿಗೆ ಮತ್ತೊಬ್ಬ ಹೆಣ್ಣು ಧಕ್ಕೆ ತರುತ್ತಿದ್ದಾಳೆ ಎಂಬುದನ್ನು ಅಷ್ಟು ಸುಲಭವಾಗಿ ಒಪ್ಪಿಕೊಳ್ಳುವವಳಲ್ಲ. ಎ.ಸಿ.ಬ್ರಾಡ್ಲೆ ಹೇಳುವಂತೆ "ಷೇಕ್ಸ್‌ಪಿಯರನಲ್ಲಿ ಕಾಣುವುದು ಕಥಾನಾಯಕನ ಮಾನಸಿಕ ಹೋರಾಟ" ಎನ್ನುವುದು ಈ ನಾಟಕಕ್ಕೂ ಅನ್ವಯಿಸುತ್ತದೆ. ಜೇಸನ್‌ನ ಹಾಗೂ ಮೀಡಿಯಳ ಮಾನಸಿಕ ಹೋರಾಟ ಕೊನೆಯವರೆಗೂ ಮುಂದುವರೆಯುತ್ತದೆ. ಈ ಹೋರಾಟವೇ ದುರಂತತೆಯ ಮೂಲವಾಗಿದೆ. ರಾಜವೈಭವ ಮರಳಿ ಪಡೆಯಲು ಹೋರಾಟಕ್ಕೆ ಅಣಿಯಾದವನು ಹೆಣ್ಣಿನ ಮೋಹಕ್ಕೂ ಒಳಗಾಗುವನು. ರಾಜ ವೈಭವಕ್ಕಾಗಿ ಪೇಲಿಯಾಸ್‌ನನ್ನು

ಕೊಲೆ ಮಾಡಿದ ಅಪವಾದದಿಂದ ಈರ್ವರೂ ತಮ್ಮ ನಾಡು ತೊರೆಯಲ್ಪಡುತ್ತಾರೆ. ಹೆಣ್ಣು, ಹೊನ್ನಿಗಾಗಿ ನಡೆಯುವ ನಿರ್ಲಜ್ಜ ಸಂಸ್ಕೃತಿಯನ್ನು ಯೂರಿಪಿಡೀಸ್ ಅದ್ಭುತವಾಗಿ ನಿರೂಪಿಸಲು ಪ್ರಯತ್ನಿಸಿದ್ದಾನೆ. ಈ ನಿರ್ಲಜ್ಜ ಸಂಸ್ಕೃತಿ ಸಮಕಾಲೀನ ವ್ಯವಸ್ಥೆಯನ್ನು ಎಂತಹ ಪ್ರಪಾತಕ್ಕೆ ತಳ್ಳಿಬಿಟ್ಟಿದೆ ಎಂಬುದನ್ನೂ ಕೂಡ ಈ ಸಂದರ್ಭದಲ್ಲಿ ಗಮನಿಸಬಹುದು. ಈ ರೀತಿಯ ತಲ್ಲಣಗಳು ಯಾವ ಕಾಲಕ್ಕೂ ರಾಜಕಾರಣದ ಸಂದರ್ಭದಲ್ಲಿ ಇರುತ್ತವೆ ಎಂಬುದನ್ನು ಯೂರಿಪಿಡೀಸ್ ನಂಥ ಮಹಾನ್ ನಾಟಕಕಾರರು ಮಾತ್ರವೇ ಹೇಳಬಲ್ಲರು. ಸೋಗುಗಾರಿಕೆ ಈ ಜಗತ್ತನ್ನು ನಾಶಪಡಿಸುತ್ತದೆ ಎಂಬುದೂ ಕೂಡ ಈ ನಾಟಕದ ಮುಖ್ಯ ಧ್ವನಿಯಾಗಿದೆ. ಮೀಡಿಯಳನ್ನು ತನ್ನ ರಾಜಾಧಿಕಾರದ ರಾಜಾಜ್ಞೆಯ ಮೂಲಕ ಗಡೀಪಾರು ಮಾಡಿದಾಗ ಜೇಸನ್‌ನನ್ನು ಭೇಟಿಯಾದ ಮೀಡಿಯ "ಇಲ್ಲೆಲ್ಲ ನನ್ನ ವಿವೇಕಕ್ಕಿಂತ ಪ್ರೀತಿಯ ಕೈಮೇಲಾಯಿತು"(ಪುಟ 110) ಎಂದು ಹೇಳುತ್ತಾಳೆ. ಪ್ರೀತಿಗೆ ನೀನು ಕೊಡುವ ಬೆಲೆ ಇದೇನಾ? ಎಂದು ಪ್ರಶ್ನಿಸುತ್ತಾಳೆ. ಅಪ್ಪಟ ಚಿನ್ನ ಮತ್ತು ಖೋಟಾ ಚಿನ್ನಕ್ಕೆ ವ್ಯತ್ಯಾಸವಿಲ್ಲವೇನು? ಎಂದು ಪ್ರಶ್ನಿಸಿದಂತಿದೆ. ಜೇಸನ್ 'ನಾವು ಚೆನ್ನಾಗಿ ಬದುಕಬೇಕು, ಬಡತನದಿಂದ ತೊಳಲಾಡಬಾರದು ಎಂಬುದು ಮಾತ್ರ ಮುಖ್ಯವಾದ ವಿಚಾರ"(ಪುಟ 114) ಎಂದು ತನ್ನ ಸ್ಥಿತಿಯನ್ನು ಹೇಳಲು ಅವನು ಪ್ರಯತ್ನಿಸಿದರೆ ಅದನ್ನು ಕೇಳಲು ಅವಳು ಇಷ್ಟಪಡುವುದಿಲ್ಲ. ಅವರಿಬ್ಬರ ದೀರ್ಘ ಚರ್ಚೆ ವಿಫಲವಾಗುತ್ತದೆ. ಈ ಚರ್ಚೆ ಸಮಕಾಲೀನ ವಿವಾಹ ಸಂದರ್ಭದ ಅನೇಕ ಸಂಗತಿಗಳಿಗೆ ಒಳನೋಟ ಗಳನ್ನೊದಗಿಸುತ್ತದೆ. ಅನಾಗರಿಕಳಾದರೂ ನನ್ನ ಪ್ರೀತಿಯ ಮುಂದೆ ನಿನ್ನ ಪ್ರೀತಿ ಸೋಗುಗಾರಿಕೆಯದ್ದು ಎಂದು ಹೇಳುತ್ತ 'ನಾಗರಿಕ' ಎಂಬುದನ್ನು ಲೇವಡಿ ಮಾಡಿದ್ದಾಳೆ.

ಮೀಡಿಯ ನಾಟಕ ಬರೀ ಕ್ರೌರ್ಯದ ಕತೆಯಲ್ಲ. ಆ ಕ್ರೌರ್ಯಕ್ಕೆ ಕಾರ್ಯ, ಕಾರಣಗಳನ್ನು ಚರ್ಚಿಸುತ್ತದೆ. ಪ್ರೇಮ ಜೀವನ ಸುಖಕರವಾಗಿರಬೇಕಾದರೆ ಒಲಿದ ಮನಸ್ಸುಗಳ ತೀರ್ಮಾನವೇ ಅಂತಿಮವಾಗಿರುತ್ತದೆಯೇ ಹೊರತು ಹೊರಗಿನ ರಾಜಕಾರಣವಾಗಲೀ ಸಾಮಾಜಿಕ ಸಂಗತಿಗಳಾಗಲೀ ಮುಖ್ಯವಾಗುವುದಿಲ್ಲ ಎಂಬ ಮಹತ್ವದ ಸಂಗತಿಗಳನ್ನು ನಾಟಕಕಾರ ಗಂಭೀರವಾಗಿ ಹೇಳಲು ಪ್ರಯತ್ನಿಸಿದ್ದಾನೆ. "ಪ್ರೀತಿ" ಜೀವನವನ್ನು ಹಸಿರಾಗಿಸುತ್ತದೆ. "ದ್ವೇಷ" ಜೀವನವನ್ನು ನಾಶ ಮಾಡುತ್ತದೆ ಎಂಬ ಮಹತ್ವದ ತಾತ್ವಿಕತೆಯನ್ನು ಈ ನಾಟಕ ಹೊಂದಿದೆ. ಸಂಸಾರ ಜೀವನದಲ್ಲಿ ಗಂಡು ಹೆಣ್ಣಿನ ಮಧ್ಯೆ ಸಹನೆ, ತ್ಯಾಗ,ಪ್ರೀತಿಗಳಿಲ್ಲದಿದ್ದರೆ ಎರಡು ಸಂಸ್ಕೃತಿಗಳ ಬೆಸುಗೆ ಅರ್ಥಪೂರ್ಣವಾಗಲಾರದು. ಎರಡು ಸಂಸ್ಕೃತಿಗಳ ನಡುವೆ ಕೊಡು,ಕೊಳುಗೆಗಳು ಇಲ್ಲದಿದ್ದರೆ ಎಂಥ ದುರಂತ ಒದಗಬಹುದು ಎಂಬುದನ್ನು ನಾಟಕ ಹೇಳುತ್ತಿದೆ. ಸಮಕಾಲೀನ ಸಂದರ್ಭದಲ್ಲಿ ಪ್ರೇಮ ವಿವಾಹಗಳು ಮುರಿದು ಬೀಳುತ್ತಿರುವ ಸಂಗತಿಗಳಿಗೂ ಈ ನಾಟಕ ಉತ್ತರ ಹೇಳುತ್ತಿದೆ. ಇಲ್ಲಿ ನಾಗರಿಕ, ಅನಾಗರಿಕ ಎಂಬ ಶ್ರೇಣಿಗಳು ಕೆಲಸ ಮಾಡಿದ್ದರೆ ಸಮಕಾಲೀನ ಸಂದರ್ಭದಲ್ಲಿ ಮೇಲ್ಜಾತಿ-ಕೆಳಜಾತಿ, ಬಡವ-ಬಲ್ಲಿದ ಎಂಬ ಶ್ರೇಣಿಗಳು ಕೆಲಸ ಮಾಡುತ್ತಿವೆ. ಸಮಕಾಲೀನ ಸಂದರ್ಭದಲ್ಲಿ ಜಾತಿ ಮತ್ತು ವರ್ಗ ಪ್ರಧಾನವಾಗಿ ಕೆಲಸ ಮಾಡುತ್ತಿರುವುದ ರಿಂದಲೇ ಅನೇಕ ಸೈದ್ಧಾಂತಿಕ ಬಿಕ್ಕಟ್ಟುಗಳು ಎದುರಾಗುತ್ತಿವೆ. ಈ ಬಿಕ್ಕಟ್ಟುಗಳಿಗೆ ಸೂಕ್ಷ್ಮವಾಗಿ, ಅಷ್ಟೇ ಸರಳವಾಗಿ ನಮ್ಮ ಸಮಾಜ ಉತ್ತರಿಸಲು ಶಕ್ತವಾಗಿಲ್ಲ ದಿರುವುದು ನಮ್ಮ ವ್ಯಂಗ್ಯವೇ ಆಗಿರುವುದು ದುರಂತ.

'ಮೀಡಿಯ' ಗ್ರೀಕ್ ಸಂಪ್ರದಾಯದ ಸರಕನ್ನು ಪಡೆದೂ ಕೂಡ ಯೂರಿಪಿಡೀಸ್‌ನ ಮಹತ್ವದ ಒಳನೋಟಗಳಿಂದ ಒಂದು ಅಸಾಧಾರಣ ನಾಟಕವಾಗಿದೆ. ಸಾಮಾಜಿಕ ಪರಿಸರದಲ್ಲಿ ಕುಟುಂಬವನ್ನು ಉಳಿಸುವ ಮಹತ್ವದ ಶಕ್ತಿಯಿದ್ದರೆ 'ಪ್ರೀತಿ'ಗೆ ಮಾತ್ರ ಸಾಧ್ಯ ಎಂದು ಹೇಳಿದ್ದಾನೆ. ಆ 'ಪ್ರೀತಿ' ದ್ವೇಷವಾಗಿ ಮಾರ್ಪಟ್ಟರೆ ಎಂಥ ಅನಾಹುತಕ್ಕೆ ಕಾರಣವಾಗುತ್ತದೆ ಎಂಬುದನ್ನು ಸಮಾಜ, ರಾಜಪ್ರಭುತ್ವ, ಕುಟುಂಬ ವ್ಯವಸ್ಥೆಗಳ ಹಿನ್ನೆಲೆಯಲ್ಲಿ ತುಂಬ ಕುಶಲತೆಯಿಂದ ಕಟ್ಟಿದ ಕಾರಣಕ್ಕೆ ಈ ನಾಟಕ ಇಂದಿಗೂ ಅಧ್ಯಯನಕ್ಕೆ ಯೋಗ್ಯವಾಗಿದೆ.

* * * * *

– ಡಾ. ರಘುರಾಂ .ಎ.
ಆಂಗ್ಲ ವಿಭಾಗ, ಸರ್ಕಾರಿ ಪದವಿ ಕಾಲೇಜು
ದಂಡಿನಶಿವರ



## ಸತ್ಯ-ಶೋಧ: ಸ್ಪಿನೋಜಾ ಮತ್ತವನ ರ್ಯಾಡಿಕಲ್ ಕೃತಿ ಎಥಿಕ್ಸ್

ದೇವರ ಸತ್ಯವನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸಿದ್ದರಿಂದ ಮನುಷ್ಯರ ದ್ವೇಷ ಕಟ್ಟಿಕೊಂಡ ಸ್ಪಿನೋಜಾ ತಾನು ಬದುಕಿದ್ದ ಕಾಲದಲ್ಲಿ (1632-77) ತುಂಬಾ ರ್ಯಾಡಿಕಲ್ ಎಂದು ಕುಖ್ಯಾತನಾಗಿದ್ದವನು. ತನ್ನ ೨೪ ನೇ ವಯಸ್ಸಿನಲ್ಲಿ ಆ್ಯಮ್ಸ್ಟರ್‌ಡ್ಯಾಂನ ತನ್ನ ಯಹೂದಿ ಸಮುದಾಯದಿಂದ ಉಚ್ಚಾಟಿತನಾಗುತ್ತಾನೆ. ಯಹೂದಿಯ ಧಾರ್ಮಿಕ ಹಿರೀಕರಿಗೆ ಸ್ಪಿನೋಜಾನ ಅಸಾಂಪ್ರದಾಯಿಕ ಧೋರಣೆಗಳು ಸಹಿಸಲಾಗದ ಮುಜುಗರವನ್ನು ಮುಂದಿಟ್ಟವು. ಹದಿನಾಲ್ಕು ವರ್ಷಗಳ ನಂತರ ಡಚ್ ರಾಜಕಾರಣದಲ್ಲಿ ಕೆಲವೊಂದು ಘಟನಾವಳಿಗಳನ್ನು ಪ್ರಭಾವಿಸಲೆಂದು ವಿಚಾರ ಸ್ವಾತಂತ್ರ್ಯ ಮತ್ತು ಪತ್ರಿಕಾ ಸ್ವಾತಂತ್ರ್ಯವನ್ನು ಎತ್ತಿಹಿಡಿದ ಪುಸ್ತಕವೊಂದನ್ನು ಪ್ರಕಟಿಸಿದ. ಅದರಲ್ಲಿ ತನ್ನ ನಿಲುವನ್ನು ಸಮರ್ಥಿಸುತ್ತಾ ಬೈಬಲ್‌ನ ಪಾರಂಪರಿಕ ಅಭಿಪ್ರಾಯಗಳು, ಸಾಂಸ್ಥೀಕರಣಗೊಂಡ ಧರ್ಮ ಮತ್ತು ರಾಜಕೀಯ ತಳಹದಿಯ ಆಧಾರಗಳನ್ನು ವಿಶ್ಲೇಷಿಸುತ್ತಾ ಪ್ರಶ್ನೆಗಳನ್ನು ಮುಂದಿಡುತ್ತಾನೆ. ಹಾಲೆಂಡ್ ಉದಾರವಾದಿ ದೇಶವಾಗಿದ್ದರೂ ಸ್ಪಿನೋಜಾನ ಕೃತಿ "Theological-Political Treatise" ಅವತ್ತಿನ ರಾಜಕೀಯವನ್ನು ಪರಿಣಾಮ ಕಾರಿಯಾಗಿ ಎದುರಿಸಲು ಸೋತಿತಲ್ಲದೇ ಅಧಿಕಾರಿ ವಲಯದಿಂದ ಬಹಿಷ್ಕರಿಸಲ್ಪಟ್ಟಿತು. ಆದರೆ ಯೂರೋಪಿನಾದ್ಯಂತ ಬುದ್ಧಿಜೀವಿಗಳ ಅಭಿಮಾನವನ್ನು ಪಡೆಯಿತು. ಸ್ಪಿನೋಜಾ ಅಪಾಯಕಾರಿ ಸ್ವತಂತ್ರ ವಿಚಾರಿ ಮತ್ತು ಅಥೇಯಿಸ್ಟ್ ಎಂಬುದು ಸಿದ್ಧವಾಯಿತು.




ಇಂತಹ ಕುಪ್ರಸಿದ್ಧವಾದ ಮತ್ತು ಅಪನಂಬಿಕೆಯ ವಾತಾವರಣದಲ್ಲಿ ಸ್ಪಿನೋಜಾ ತನ್ನ ಪ್ರಮುಖ ಕೃತಿ 'ಎಥಿಕ್ಸ್'ಅನ್ನು ಬರೆಯುತ್ತಾನೆ. 44ನೇ ವಯಸ್ಸಿನಲ್ಲಿ ಅವನು ಮರಣಿಸಿದಾಗ ಮರಣಶಯ್ಯೆಯ ಬಳಿಯಿದ್ದ ಎಥಿಕ್ಸ್ ಕೃತಿಯನ್ನು ಗೆಳೆಯರು ಗುಟ್ಟಾಗಿ ಪ್ರಕಟಿಸುತ್ತಾರೆ. ಅಧಿಕಾರಶಾಹಿಯು ಇದನ್ನು ಬಹಿಷ್ಕರಿಸಿದ್ದರೂ ಬಹು ಜನರ ಓದಿಗೆ ಇದು ನಿಲುಕಿತು. ತನ್ನ ಹಿಂದಿನ ಕೃತಿಗಳಲ್ಲಿ ರಾಜಕೀಯ ಮತ್ತು ಧಾರ್ಮಿಕ ಸಿದ್ಧಾಂತಗಳ ಬಗ್ಗೆ ಪ್ರಸ್ತಾಪಿಸಿದ್ದರೂ ತನ್ನ ಎಥಿಕ್ಸ್ ಕೃತಿಯಲ್ಲಿ metaphysics, epistemology, physics, philosophy of mind, psychology, and ethicsಗಳ ಮೂಲಭೂತ ಪ್ರಶ್ನೆಗಳನ್ನು ನಿರ್ವಹಿಸಲು ಪ್ರಯತ್ನಿಸಿದ್ದಾನೆ. ಇಲ್ಲಿನ ಯಾವುದೇ ಪ್ರಶ್ನೆಗಳನ್ನು ಸ್ಪಿನೋಜಾ ಪ್ರತ್ಯೇಕವಾದ ಒಗಟಿನಂತೆ ಅನುಸಂಧಾನ ಮಾಡುವುದಿಲ್ಲ. ಬದಲಾಗಿ ಪ್ರತಿಯೊಂದು ವಿಶ್ಲೇಷಣಾ ಕ್ಷೇತ್ರಕ್ಕೂ ನಿರ್ದಿಷ್ಟವಾದ ಕಾರ್ಯಕ್ಷೇತ್ರವಿದ್ದು ಪ್ರತಿಯೊಂದೂ ಸಹ ಅನ್ಯ ಕ್ಷೇತ್ರದೊಂದಿಗೆ ಸಂಯೋಜನೆ ಗೊಂಡಿರುತ್ತದೆ ಎಂಬುದನ್ನು ಕ್ರಮಬದ್ಧವಾದ ಹೇಳಿಕೆಗಳ ಮೂಲಕ ವಿವರಿಸುತ್ತಾನೆ. ಸ್ಪಿನೋಜಾನ ಮಹತ್ವಕಾಂಕ್ಷಿ ಮತ್ತು ಬಹುಮುಖ ಕೃತಿಯಾದ ಎಥಿಕ್ಸ್‌ನಲ್ಲಿ ಮನುಷ್ಯ, ದೇವರು ಮತ್ತು ಸಮಸ್ತ ವಿಶ್ವದ ಬಗ್ಗೆ ಇರುವ ಎಲ್ಲಾ ಪಾರಂಪರಿಕ ಗ್ರಹಿಕೆಗಳನ್ನು ಮರುವಿಮರ್ಶಿಸುತ್ತಾನೆ. ದೇವರು, ಧರ್ಮ, ಪ್ರಕೃತಿ, ಮತ್ತು ಉತ್ತಮ ಬದುಕಿನ ಸತ್ಯಗಳನ್ನು ವ್ಯಾಖ್ಯಾನಗಳು, ಸೂತ್ರಗಳು, ಉಪಸಿದ್ಧಾಂತಗಳು ಮತ್ತು ಗಣಿತದ ಸಹಾಯದಿಂದ ಮಾಡಿದ ಟಿಪ್ಪಣಿಗಳಲ್ಲಿ ವಿವರಿಸುತ್ತಾನೆ. ಎಥಿಕ್ಸ್ ಶೀರ್ಷಿಕೆಯ ಆಯ್ಕೆಯೇ ಸೂಚಿಸುವ ಹಾಗೆ ಆನಂದವೆಂಬುದು ಮೂಢನಂಬಿಕೆ ಮತ್ತು ಭಾವಾತಿರೇಕಗಳಿಂದ ದೊರೆತ ಬಿಡುಗಡೆಯಾಗಿರುತ್ತದೆ. ಅಥವಾ Ontology ಎಂಬುದು ಜಗತ್ತಿನ ನಿಗೂಢತೆಯನ್ನು ವಿಶದಗೊಳಿಸುತ್ತಲೇ ಮಾನವರು ಬದುಕಲಿಕ್ಕಾಗಿ ಕೇವಲ ವಿವೇಚನೆಯನ್ನು ಮಾತ್ರವೇ ಅವಲಂಬಿಸುವಂತೆ ವಿವರಿಸುತ್ತದೆ. ಸ್ಪಿನೋಜಾ ತಾತ್ವಿಕತೆಯ ಸಾರಾಂಶವು ಆತನ ಎಥಿಕ್ಸ್ ಕೃತಿಯಲ್ಲಿ ಸಂಗ್ರಹವಾಗಿದೆ.

ದೇವರು ಅಂದರೆ ಏನು?

***"By God, I mean a being absolutely infinite, that is to say, a substance consisting of infinite attributes, each of which expresses***

***eternal and infinite essence"***

ದೇವರೆಂದರೆ ಅನಂತ. ತನ್ನ ಕಾರಣಕ್ಕಾಗಿಯೇ ಅಸ್ತಿತ್ವದಲ್ಲಿರುವಂತಹದ್ದು (that is to say, because of himself, causa per se), ಅನಂತ ವಿಶ್ವದ ಏಕಮಾತ್ರ ಜೀವದ್ರವ್ಯ (substance).

ಸ್ಪಿನೋಜಾನ ಪ್ರಮುಖ ಪ್ರಮೇಯಗಳ ಸಾರಾಂಶ:

೧. ಪ್ರಕೃತಿಯ ಭಾವಾತಿರೇಕ (Affections) ಗಳಿಗಿಂತ ಆದಿಯಲ್ಲಿಯೇ ಈ ಜೀವದ್ರವ್ಯವಿತ್ತು.

೨. ಭಿನ್ನ, ಭಿನ್ನ ಸಹಜಧರ್ಮಗಳನ್ನು ಹೊಂದಿರುವ ಎರಡು ಜೀವ ದ್ರವ್ಯಗಳಲ್ಲಿ ಸಾಮ್ಯತೆ ಇರುವುದಿಲ್ಲ.

೩. ಒಂದಕ್ಕೊಂದು ಸಾಮ್ಯತೆ ಇರದ ವಸ್ತುಗಳಲ್ಲಿ, ಒಂದು ಇನ್ನೊಂದರ ಕಾರಣವಾಗಬೇಕಿಲ್ಲ.

೪. ಎರಡು ಅಥವಾ ಅದಕ್ಕಿಂತ ಹೆಚ್ಚಿನ ಪ್ರತ್ಯೇಕ ವಸ್ತುಗಳನ್ನು ಅವುಗಳ ಪ್ರಕೃತಿಯ ವ್ಯತ್ಯಾಸದಿಂದ, ಜೀವದ್ರವ್ಯದಿಂದ ಅಥವಾ ಭಾವಾತಿರೇಕಗಳ ಭಿನ್ನತೆಯಿಂದ ವಿಂಗಡಿಸಬಹುದು.

೫. ಪ್ರಕೃತಿಯಲ್ಲಿ ಒಂದೇ ತರಹದ ಸಹಜ ಗುಣ ಹೊಂದಿರುವ ಒಂದಕ್ಕಿಂತ ಹೆಚ್ಚು ಜೀವ ದ್ರವ್ಯಗಳನ್ನು ಕಾಣಬಹುದು.

೬. ಒಂದು substance ನಿಂದ ಮತ್ತೊಂದು substance ಅನ್ನು ಉತ್ಪಾದಿಸಲು ಸಾಧ್ಯವಿಲ್ಲ.

೭. ಜೀವದ್ರವ್ಯದ ಸಹಜ ಧರ್ಮವು 'ಇರು' ವುದೇ ಆಗಿರುತ್ತದೆ.

೮. ಪ್ರತಿಯೊಂದು substance ಕೂಡಾ ಅವಶ್ಯಕವಾಗಿ ಅನಂತವಾಗಿರುತ್ತದೆ.

೯. 'ಇರು'ವಿಕೆಯಲ್ಲಿಯೇ ಎಲ್ಲವೂ ಅಡಗಿರುತ್ತದೆ ಮತ್ತು ಅದು ವಾಸ್ತವದ ಭಾಗವೇ ಆಗಿರುತ್ತದೆ.

೧೦. ಪ್ರತಿಯೊಂದು ಜೀವದ್ರವ್ಯದ ಸಹಜ ಧರ್ಮವನ್ನು ಅದರಿಂದಲೇ ಕಲ್ಪಿಸಿಕೊಳ್ಳಬೇಕು.

೧೧. ದೇವರೆಂಬುದು, ಅಂದರೆ ಶಾಶ್ವತವಾದ, ಅನಂತವಾದ ಸಾರವನ್ನು ಹೊಂದಿರುವ ಅಗಣಿತ ಸಹಜಧರ್ಮಗಳನ್ನು ಹೊಂದಿರುವ ಜೀವದ್ರವ್ಯವು, ಅಸ್ತಿತ್ವದಲ್ಲಿದೆ.

೧೨. Substance ಎಂಬುದು ಮೊದಲೇ ಆಗಿ ಇರುವುದಿಲ್ಲ.

೧೩. ಸಂಪೂರ್ಣವಾಗಿ ಅನಂತವಾಗಿರುವುದು ವಿಭಜನೆಗೆ ಒಳಪಡುವುದಿಲ್ಲ.

೧೪. ದೇವರಲ್ಲದ ಯಾವುದೇ ಜೀವದ್ರವ್ಯವನ್ನು ನೀಡುವುದಕ್ಕಾಗಲೀ, ರೂಪಿಸುವುದಕ್ಕಾಗಲೀ ಸಾಧ್ಯವಿಲ್ಲ.

ಈ ಪ್ರಮೇಯಗಳು ನಿರೂಪಿಸುವುದೇನೆಂದರೆ ದೇವರೆಂಬುದು ಅನಂತ, ಅನಿವಾರ್ಯ, ಕಾರಣವಿಲ್ಲದ್ದು. ಇದರಲ್ಲಿ ಸರಳವಾದ ಮೂರು ಹಂತಗಳನ್ನು ಗುರುತಿಸಬಹುದು. ಸ್ಪಿನೋಜಾ ಹೇಳುವ ಹಾಗೆ, ಎರಡು substanceಗಳು ಒಂದೇ ಸಹಜ ಧರ್ಮವನ್ನು ಹೊಂದಿರಬಹುದು. ಅನಂತ ಸಾರವನ್ನು ಹೊಂದಿರುವ ಜೀವದ್ರವ್ಯವಿರಲೂ ಬಹುದು. ಆದರೆ ದೇವರಿಲ್ಲದ ಜೀವದ್ರವ್ಯವಿಲ್ಲ.

ಅಂದರೆ ಸ್ಪಿನೋಜಾನ ದೇವರು an immanent (ಇನ್ನೇನು ಸಂಭವಿಸಲಿರುವ) God, a universal cause which ensures the continuity of all that exists. ಈ ದೇವರಿಗೆ ಯಹೂದಿ-ಕ್ರಿಶ್ಚಿಯನ್ ದೇವರಂತೆ ವಿಶ್ವವನ್ನು ಸೃಷ್ಟಿಸಲು ಸಾಧ್ಯವಿಲ್ಲ. ಪ್ರಮೇಯ ೨೯ರಲ್ಲಿ ಹೇಳಿರುವಂತೆ ಪ್ರಕೃತಿಯಲ್ಲಿ ಯಾವುದೂ ಅನಿಶ್ಚಿತವಲ್ಲ, ಬದಲಿಗೆ ಯಾವುದಾದರೊಂದು ಪರಿಣಾಮವನ್ನು ಯಾವುದೋ ಒಂದು ರೀತಿಯಲ್ಲಿ ಉತ್ಪಾದಿಸುವ ಸಲುವಾಗಿ ಅಸ್ತಿತ್ವದಲ್ಲಿರಲೇ ಬೇಕಾದ ಪ್ರಕೃತಿಯ ಸಹಜ ಅವಶ್ಯಕತೆ. ವಸ್ತುಗಳು ಹೇಗೆ ದೇವರೊಂದಿಗೆ ಸಂಬಂಧಿಸಿವೆ ಎಂಬುದನ್ನು ವಿವರಿಸುವ ಸಲುವಾಗಿ ಸ್ಪಿನೋಜಾ ಭೌತಶಾಸ್ತ್ರದ, ತರ್ಕದ ತತ್ವಗಳನ್ನು, ರೇಖಾಗಣಿತದ ನಿಯಮಗಳನ್ನು ಅವಲಂಬಿಸಿರುವುದರಿಂದ ಸಾಮಾನ್ಯ ಓದುಗರಿಗೆ ಕ್ಲಿಷ್ಟವಾಗುತ್ತವೆ. ಸಾರಾಂಶದಲ್ಲಿ ಸ್ಪಿನೋಜಾನ ದೇವರಿಗೂ ಪ್ರಕೃತಿಗೂ ಯಾವುದೇ ವ್ಯತ್ಯಾಸವಿಲ್ಲ. ಪ್ರಕೃತಿಯ ಸಹಜಧರ್ಮದ ಅನುಸಾರವಾಗಿ ಆದಿ-ಅಂತ್ಯಗಳೂ ಸಹ ಇಲ್ಲಿ ಇಲ್ಲ.

ಸ್ಪಿನೋಜಾನ ಕಾರಣ-ಪರಿಣಾಮಗಳ (Causal-determinism) ಸಿದ್ಧಾಂತದಲ್ಲಿ ಪವಾಡಗಳಿಗೆ, ಮೂಢನಂಬಿಕೆಗಳಿಗೆ ಅವಕಾಶವಿಲ್ಲ. ಹಾಗೆಯೇ ಸ್ವರ್ಗ, ನರಕಗಳನ್ನು ಸೃಷ್ಟಿಸುವ ದೇವರುಗಳೂ ಇಲ್ಲ. ಸಹಜವಾಗಿಯೇ ಸಂಪ್ರದಾಯಿಕ ದೈವ ಭಕ್ತರು ಅವನ ವಿರೋಧಿಗಳಾದರು. ಅದೂ ಅಲ್ಲದೇ ಪ್ರತಿಯೊಂದು ಕಾರಣ-ಪರಿಣಾಮಗಳು ಪೂರ್ವ ನಿರ್ಧಾರಿತವಾಗಿದ್ದ ಮೇಲೆ ಮಾನವರ Free Will ಗೆ, ನೈತಿಕ ಜವಾಬ್ದಾರಿಗೆ ಏನು ಕೆಲಸ ಎಂದು ಕೆಲವರು ಪ್ರಶ್ನಿಸಿದರು. Descartes ಇದೇ ಕಾರಣಕ್ಕಾಗಿ determinism ಅನ್ನು ನಿರಾಕರಿಸಿದ್ದ. ಅವನ ಪ್ರಸಿದ್ಧ ದ್ವಯ ಸಿದ್ಧಾಂತ, ಅಂದರೆ ಮಾನವರಲ್ಲಿ ದೇಹ ಮತ್ತು

ಮನಸ್ಸು ಬೇರೆ ಬೇರೆ ಎಂಬ ತಿಳುವಳಿಕೆಯನ್ನು ಸ್ಪಿನೋಜಾ ನಿರಾಕರಿಸುತ್ತಾನೆ. ಅವನ ಪ್ರಕಾರ ದೇಹ ಮತ್ತು ಮನಸ್ಸು ಒಂದೇ ವಿಷಯವನ್ನು ಅರ್ಥ ಮಾಡಿಕೊಳ್ಳುವ ಭಿನ್ನ ರೀತಿಗಳು ಅಷ್ಟೇ. ನಮ್ಮ ಬಗ್ಗೆ, ಪ್ರಪಂಚದ ಬಗ್ಗೆ ಅರ್ಥ ಮಾಡಿಕೊಳ್ಳಲು ನಾವು ಹೇಗೆ ಜ್ಞಾನವನ್ನು ಬೆಳೆಸಿಕೊಳ್ಳಬೇಕು ಎಂಬುದು ಮುಖ್ಯ. ಈ ರೀತಿಯ ಗ್ರಹಿಕೆಯಿಂದ ಭಾವಾತಿರೇಕಗಳನ್ನು ಅನ್ವೇಷಿಸುವುದೂ ಸಹ ಸಾಧ್ಯ.

ಸಾಮಾನ್ಯವಾಗಿ ಭಾವಾತಿರೇಕಗಳು ಅತಾರ್ಕಿಕವಾಗಿರುತ್ತವೆ, ಅತಿರೇಕ ಮತ್ತು ವಿನಾಶಕಾರಿಯಾಗಿ ರುತ್ತವೆ. ಆದ್ದರಿಂದಲೇ ನೈತಿಕ ಜವಾಬ್ದಾರಿಯನ್ನು ಕಾಯುವ ಸಂಸ್ಥೆಗಳು ಇಂತಹ ನಡವಳಿಕೆಗಳನ್ನು ಹತೋಟಿಯಲ್ಲಿಡಲು ಬಯಸುತ್ತವೆ. ಸ್ಪಿನೋಜಾ ಕೂಡ ಭಾವಾತಿರೇಕಗಳು ಮತ್ತು ವಿವೇಚನೆಯ ನಡುವಿನ ಸಂಬಂಧಗಳ ಬಗ್ಗೆ ಆಸಕ್ತಿ ತೋರುತ್ತಾನೆ. ಆದರೆ ಭಾವಾತಿರೇಕಗಳನ್ನು ಹತೋಟಿಯಲ್ಲಿಡುವುದರಲ್ಲಿ ಅಲ್ಲ, ಬದಲಾಗಿ ಅವುಗಳ ವಿನಾಶಕಾರಿ ಪ್ರಭಾವದಿಂದ ತಪ್ಪಿಸಿಕೊಳ್ಳುತ್ತಲೇ ಅವುಗಳನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸಬೇಕು ಎನ್ನುತ್ತಾನೆ. ಅದರ ಫಲವಾಗಿ ಗಳಿಸುವ ಆನಂದ ಮತ್ತು ಸ್ವಾತಂತ್ರ್ಯವನ್ನು blessedness ಎಂದು ಕರೆಯುತ್ತಾನೆ. ವಿವೇಚನೆಯ ಯುಕ್ತಾಯುಕ್ತ ಸ್ವ-ತಿಳುವಳಿಕೆಯಲ್ಲಿ ಲೌಕಿಕ ಮುಕ್ತಿಯಿದೆ ಮತ್ತು ನಮ್ಮನ್ನು ನಾವು ಈ ರೀತಿಯಾಗಿ ಅರ್ಥಮಾಡಿಕೊಂಡರೆ ಮನೋವಿಕಾರಗಳ ಏರಿಳಿತಗಳನ್ನು ನಿಯಂತ್ರಿಸಿಕೊಳ್ಳಬಹುದು, ಗ್ರಹಿಕೆ ಸ್ಪಷ್ಟವಾಗುವುದು ಮತ್ತು ಮನಸ್ಸು ಶಾಂತಿ ಸಮಾಧಾನವನ್ನು ಹೊಂದುತ್ತದೆ. ಇದೆಲ್ಲವೂ ದೊರೆತಿರುವುದು ಪ್ರಕೃತಿಯಿಂದ, ಅದರ ಬಲ, ಸುವ್ಯವಸ್ಥೆ ಮತ್ತು ವೈವಿಧ್ಯತೆಯಿಂದ.

ಆಧಾರ:
'Spinoza's Ethics' by J. Thomas Cook. South Asian Edition, 2008.

- ಡಾ॥ ಸರಸ್ವತಿ ಕೆ.ಬಿ.
ಸರ್ಕಾರಿ ಪದವಿ ಕಾಲೇಜು, ತಿಪಟೂರು

Prathispanda Kannada Monthly literary cultural periodical Title verification no.- KARKAN 22840/10/1/2012 TC

Book Post

ವಿಳಾಸ:
ಪ್ರತಿಸ್ಪಂದ
ತೋಟದ ಮನೆ ನಂ: 107 (25)
ಕಂಚಾಘಟ್ಟ ಹೊಸ ಬಡಾವಣೆ
ತಿಪಟೂರು - 572201

Editor and Publisher : K.R.Basavaraju, Farm House No : 107 (25)
Kanchagatta New Extension , Tiptur- 572201, Karnataka. Email : prathispandha@gmail.com
Printed at : Mithra DTP Works, Nittur